RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಜನವರಿ ೧೦, ೨೦೧೩ (ಪುಷ್ಯ ೨೦, ಶಕ ವರ್ಷ ೧೯೩೪)<br>Bangalore, Thursday, January 10, 2013 (Pushya 20, Shaka Varsha 1934) | ಸಂಚಿಕೆ ೨<br>Issue 2 |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಾರ್ಮಿಕ ಸಚಿವಾಲಯ

**ವಿಷಯ:** ಶ್ರೀ ಶಿವಲಿಂಗಮೂರ್ತಿ, ಜಂಟೀ ನಿರ್ದೇಶಕರು (ತರಬೇತಿ) ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ವಿಭಾಗೀಯ ಕಚೇರಿ, ಮೈಸೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ನಡೆದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಕುರಿತು.

**ಓದಲಾಗಿದೆ:**
1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–39/ಸಿಆರ್–18/2006 ದಿನಾಂಕ 02/08/2007.
2) ಸರ್ಕಾರದ ಆದೇಶ ಸಂಖ್ಯೆ: ಕಾಇ 323 ಇಟಿಐ 2006 ದಿನಾಂಕ: 08/09/2008 ಮತ್ತು ಸಮ ಸಂಖ್ಯೆಯ ತಿದ್ದುಪಡಿ ಆದೇಶ ದಿನಾಂಕ: 29/11/2008.
3) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.9/2004 ದಿನಾಂಕ 10/05/2012.
4) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ 86 ಸಿಎನ್‌ಎಸ್ 12 ದಿನಾಂಕ: 28/09/2012.

**ಪ್ರಸ್ತಾವನೆ:**

ಮೇಲೆ ಉಲ್ಲೇಖ(1)ರಲ್ಲಿನ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು (ತರಬೇತಿ) ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ಶ್ರೀ ಎಸ್. ಎಂ. ಮರುಳಸಿದ್ದಪ್ಪ, ಕಾರ್ಯದರ್ಶಿ, ಶ್ರೀ ರಾಮೇಶ್ವರ ಎಜುಕೇಷನ್ ಸೊಸೈಟಿ(ರಿ), ಅರಸೀಕೆರೆ, ಹಾಸನ ಜಿಲ್ಲೆ ಇವರ ಎರಡು ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳ ಪ್ರವೇಶದ ಪಟ್ಟಿಗಳ ಬಿಡುಗಡೆ ಹಾಗೂ ಸಂಸ್ಥೆಗಳ ಸಿಬ್ಬಂದಿಗಳಿಗೆ ಅನುದಾನದ ಬಿಡುಗಡೆಗಾಗಿ ಸರ್ಕಾರಿ ಕೆಲಸವನ್ನು ಮಾಡಲು ರೂ.20,000/– (ಇಪ್ಪತ್ತು ಸಾವಿರ ರೂಪಾಯಿಗಳು ಮಾತ್ರ)ಗಳ ಅಕ್ರಮ ಸಂಭಾವನೆಯನ್ನು ಕೇಳಿರುವ ಪ್ರಕರಣಕ್ಕೆ ಕುರಿತಂತೆ ಗುನ್ನೆ ಸಂಖ್ಯೆ: 18/2006ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮೈಸೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಸರ್ಕಾರಕ್ಕೆ ಕಳುಹಿಸಿಕೊಟ್ಟಿದ್ದರು. ಸದರಿಯವರು ಕಳುಹಿಸಿಕೊಟ್ಟಿರುವ ದಾಖಲಾತಿಗಳನ್ನು ಪರಿಶೀಲಿಸಿದ ನಂತರ ಆಪಾದಿತರು ಲಂಚ ನಿರೋಧ ಕಾಯ್ದೆ–1988 ರ ಕಲಂ7, 13(1)(ಡಿ) ರ ಜೊತೆಗೆ ಓದಲಾದ ಕಲಂ 13(2) ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆಯೆಂದು ಸರ್ಕಾರವು ಪರಿಗಣಿಸಿ ಉಲ್ಲೇಖ (2)ರಲ್ಲಿನ ಸರ್ಕಾರಿ ಆದೇಶದ ಮೂಲಕ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಮಂಜೂರಾತಿಯನ್ನು ನೀಡಲಾಗಿತ್ತು.

ಉಲ್ಲೇಖ(3)ರಲ್ಲಿನ ಪತ್ರದಲ್ಲಿ ಈ ಪ್ರಕರಣದಲ್ಲಿ ಮೈಸೂರಿನ 3ನೇ ಹೆಚ್ಚುವರಿ ಸೆಷನ್ಸ್ ನ್ಯಾಯಾಲಯವು ಇವರನ್ನು ತಪ್ಪಿತಸ್ಥರೆಂದು ತೀರ್ಮಾನಿಸಿ ಒಂದು ವರ್ಷದ ಕಠಿಣ ಸಜೆ ಮತ್ತು 40,000 ರೂಪಾಯಿಗಳ ದಂಡವನ್ನು, ದಂಡ ಕಟ್ಟಲು ತಪ್ಪಿದಲ್ಲಿ 6 ತಿಂಗಳ ಸಾದಾ ಸಜೆಯನ್ನು ವಿಧಿಸಿ ದಿನಾಂಕ: 17/10/2011ರಂದು ತೀರ್ಪು ನೀಡಿರುವ ಕಾರಣ ಈ ಅಧಿಕಾರಿಯನ್ನು ಸೇವೆಯಿಂದ ವಜಾಗೊಳಿಸುವಂತೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕೋರಿರುತ್ತಾರೆ.

ಈ ಮೇಲಿನ ತೀರ್ಪಿನ ವಿರುದ್ಧ ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ: 1087/2011ನ್ನು ದಾಖಲಿಸಿದ್ದು, ಇದರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಕೆಳಗಿನ ನ್ಯಾಯಾಲಯದ ತೀರ್ಪನ್ನು ದಿನಾಂಕ: 28/10/2011ರ ಮಧ್ಯಂತರ ತೀರ್ಪಿನ ಮೂಲಕ ಅಮಾನತ್ತಿನಲ್ಲಿ ಇಟ್ಟಿರುತ್ತದೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇವಿ 95 ದಿನಾಂಕ: 26/06/1996ರಲ್ಲಿ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿ ಇಟ್ಟಿದ್ದರೂ ಸಹ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) 1957ರ ನಿಯಮ 14(i) ರ ಅನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು ಎನ್ನುವುದಾಗಿ ತಿಳಿಸಲಾಗಿದೆ. ಈ ಬಗ್ಗೆ ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿತ್ತು. ಸದರಿ ಇಲಾಖೆಯು ಈ ಕೆಳಗಿನಂತೆ ಅಭಿಪ್ರಾಯವನ್ನು ನೀಡಿರುತ್ತದೆ.

**ಸಂವಿಧಾನದ ಅನುಚ್ಛೇದ 311(2)ರಡಿಯಲ್ಲಿನ ಎರಡನೇ ಪರಂತುಕದ ಖಂಡ (Clause) (ಎ)ಯು "ಕ್ರಿಮಿನಲ್ ಆರೋಪದ ಮೇಲೆ ದೋಷಿಸಿದ್ದಿಯಾಗುವಂತೆ ಮಾಡಿದ ನಡತೆಯ ಬಗ್ಗೆ ಹೇಳುತ್ತದೆಯಾದ್ದರಿಂದ ದೋಷಸಿದ್ದಿಯಾಗಿರುವುದನ್ನು ನಿಲಂಬನದಲ್ಲಿಡಲು ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ, ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರ ವ್ಯವಹರಣೆ ಹೂಡಿದ್ದಾನೆ; ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆ, ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ" ಎಂಬ ಕಾರಣಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14(1)ರನುಸಾರ ಕ್ರಮ ಜರುಗಿಸುವುದನ್ನು ತಡೆ ಹಿಡಿಯಬೇಕಾದ ಅಗತ್ಯವಿಲ್ಲ. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಿರಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2)ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14(1) ರನುಸಾರ ಶಿಸ್ತಿನ ಕ್ರಮಕೈಗೊಳ್ಳತಕ್ಕದ್ದು. ಇಲ್ಲವಾದಲ್ಲಿ, ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ಧಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರಿಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ, ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ. ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆ (Acquit)ಯಾದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದು. ಒಂದು ವೇಳೆ ಸರ್ಕಾರಿ ನೌಕರರನ್ನು ಪುನ: ಸೇವೆಗೆ ತೆಗೆದುಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ ಅರ್ಹನಾಗಿರುತ್ತಿದ್ದಂತ ಎಲ್ಲಾ ಸೌಲಭ್ಯಗಳಿಗೂ ಹಕ್ಕುಳ್ಳುವನಾಗುತ್ತಾನೆ.**

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಗಣಿಸಿ ಈ ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(viii)ರ ಅಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಲಾಗಿದೆ.

ಕರ್ನಾಟಕ ಲೋಕಸೇವಾ ಆಯೋಗ (ಸಮಾಲೋಚನೆ) ವಿನಿಯಮ 2000ದ ನಿಯಮ ಸಂಖ್ಯೆ: 5(1)(ಬಿ) ಪ್ರಕಾರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 8(v) ಇಂದ (viii) ರ ಅಡಿಯಲ್ಲಿ ನಮೂದಿಸಿರುವ ದಂಡನೆಯನ್ನು ವಿಧಿಸಬೇಕಾದಲ್ಲಿ ಕರ್ನಾಟಕ ಲೋಕಸೇವಾ ಆಯೋಗವನ್ನು ಸಮಾಲೋಚಿಸಬೇಕಾಗುತ್ತದೆ. ಆ ಪ್ರಕಾರ ಕರ್ನಾಟಕ ಲೋಕಸೇವಾ ಆಯೋಗದ ಸಮಾಲೋಚನೆ / ಸಹಮತಿ ಉಲ್ಲೇಖ (4)ರಲ್ಲಿನ ಪತ್ರದ ಮೂಲಕ ನೀಡಿದೆ

ಕರ್ನಾಟಕ ಸರ್ಕಾರ (ವ್ಯವಹಾರ ನಿಯಂತ್ರಣ) ನಿಯಮ 1977ರ 2ನೇ ಷೆಡ್ಯೂಲ್ ಕ್ರಮ ಸಂಖ್ಯೆ: 8ರ ಪ್ರಕಾರ ಕರ್ನಾಟಕ ಆಡಳಿತ ಸೇವೆಯಲ್ಲಿರುವ (ಗ್ರೂಪ್–ಎ ಹಿರಿಯ ಶ್ರೇಣಿ) ಅಧಿಕಾರಿಗಳ ತತ್ಸಮಾನ ಹುದ್ದೆಗಳಲ್ಲಿ ಕೆಲಸ ಮಾಡುವ ಅಧಿಕಾರಿಗಳಿಗೆ ಸಂಬಂಧಿಸಿದಂತೆ ಶಿಸ್ತು ಪ್ರಕರಣಗಳ ಬಗ್ಗೆ ಕ್ರಮ ಕೈಗೊಳ್ಳುವ ಮುಂಚೆ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಅಗತ್ಯವಿದೆ. ಅದರಂತೆ ಈ ಮೇಲಿನ ಪ್ರಸ್ತಾವನೆಗೆ ಸಕ್ಷಮ ಪ್ರಾಧಿಕಾರದ ಅನುಮೋದನೆಯನ್ನು ಪಡೆದು ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 231 ಇಟಿಐ 2009 ಬೆಂಗಳೂರು, ದಿನಾಂಕ: 26/11/2012**

ಮೈಸೂರಿನ 3ನೇ ಹೆಚ್ಚುವರಿ ಸೆಷನ್ಸ್ ನ್ಯಾಯಾಲಯವು ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು (ತರಬೇತಿ) ಉದ್ಯೋಗ ಮತ್ತು ತರಬೇತಿ ಇಲಾಖೆ ಇವರನ್ನು ತಪ್ಪಿತಸ್ಥರೆಂದು ತೀರ್ಮಾನಿಸಿ ಒಂದು ವರ್ಷದ ಕಠಿಣ ಸಜೆ ಮತ್ತು 40,000 ರೂಪಾಯಿಗಳ ದಂಡವನ್ನು, ದಂಡ ಕಟ್ಟಲು ತಪ್ಪಿದಲ್ಲಿ 6 ತಿಂಗಳ ಸಾದಾ ಸಜೆಯನ್ನು ವಿಧಿಸಿ ದಿನಾಂಕ: 17/10/2011ರಂದು ತೀರ್ಪು ನೀಡಿರುವ ಕಾರಣ ಸರ್ಕಾರವು ಈ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) 1957ರ ನಿಯಮ 8 (viii)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿದೆ. ಈ ಆದೇಶವು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ಕ್ರಿಮಿನಲ್ ಅಪೀಲು ಸಂಖ್ಯೆ: 1087/2011ರಲ್ಲಿನ ತೀರ್ಪಿಗೆ ಒಳಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ

**ಕೆ.ನಾಗರಾಜ**

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

**PR.2306**

## ಕಾರ್ಮಿಕ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ವತಿಯಿಂದ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಯುವಕರಿಗೆ ಚಾಲನಾ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಇವರ ಪತ್ರ ಸಂಖ್ಯೆ: ಕರಾಸಂ:ಕೇಕ:ಕಾಇ:248:2012–13 ದಿನಾಂಕ: 16/05/2012.

**ಪ್ರಸ್ತಾವನೆ:**

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಇವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ವತಿಯಿಂದ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಯುವಕರಿಗೆ ಚಾಲನಾ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸುವ ಕುರಿತು ಕಾರ್ಮಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಮತ್ತು ಅದರ ಸಹೋದರ ಸಂಸ್ಥೆಗಳಾದ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಗಳು ಪ್ರತಿವರ್ಷ ಸಾವಿರಾರು ಚಾಲಕರನ್ನು ನೇಮಿಸಿಕೊಳ್ಳುತ್ತಿದ್ದು, ಈ ನೇಮಕಾತಿಯಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಚಾಲಕರನ್ನು ನಿಯಮಾನುಸಾರ ಮೀಸಲಾತಿ ಅಡಿಯಲ್ಲಿ ನೇಮಿಸಿಕೊಳ್ಳಲಾಗುತ್ತಿದೆಯೆಂದೂ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಚಾಲಕ ವರ್ಗದಲ್ಲಿ ಕೌಶಲ್ಯ ಭರಿತ ಚಾಲಕರನ್ನು ಸಾರಿಗೆ ಸಂಸ್ಥೆಯಲ್ಲಿ ಹಾಗೂ ಸರ್ಕಾರದ ಇತರೆ ಇಲಾಖೆಗಳಲ್ಲಿ ಹಾಗೂ ಖಾಸಗಿ ಉದ್ಯಮಗಳಲ್ಲಿ ನಿಯೋಜಿಸಿಕೊಳ್ಳುವ ಅವಶ್ಯಕತೆ ಇದ್ದು, ಈ ದಿಶೆಯಲ್ಲಿ ಇವರಿಗೆ ಭಾರಿವಾಹನ ಚಾಲನಾ ತರಬೇತಿ ನೀಡಿ ಚಾಲನಾ ಪರವಾನಗಿಗಳನ್ನು ಪಡೆಯಲು ಅನುವು ಮಾಡಿಕೊಡುವುದು ಅತ್ಯಂತ ಅವಶ್ಯಕವಾಗಿರುತ್ತದೆಯೆಂದೂ ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ಹೊಂದಿರುವ ಮಳವಳ್ಳಿಯ 6 ಎಕರೆ, ಶ್ರೀನಿವಾಸಪುರದ 4 ಎಕರೆ ಮತ್ತು ಚಿಕ್ಕಮಗಳೂರಿನ 5 ಎಕರೆ ನಿವೇಶನಗಳಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಯುವಜನರಿಗಾಗಿ ಚಾಲನಾ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ ಎಂದು ತಿಳಿಸಿರುವರು.

ಸದರಿ ಉದ್ದೇಶಿತ ಚಾಲನಾ ತರಬೇತಿ ಕೇಂದ್ರಗಳಲ್ಲಿ 1,000 ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಯುವಜನರಿಗೆ ವಸತಿ ತರಬೇತಿ ಶಿಬಿರಗಳನ್ನು ಏರ್ಪಡಿಸಿ ಲಘು ಮತ್ತು ಭಾರಿ ವಾಹನ ಚಾಲನಾ ತರಬೇತಿ ನೀಡಿ ಚಾಲನಾ ಪರವಾನಗಿಗಳನ್ನು ನೀಡಲು ಉದ್ದೇಶಿಸಲಾಗಿದೆ ಎಂದು, ಈ ತರಬೇತಿ ಕೇಂದ್ರಗಳಲ್ಲಿ ಚಾಲನಾ ಪಥ, ಆಡಳಿತ ನಿರ್ವಹಣೆ ಕಟ್ಟಡ, ತರಬೇತಿ ಕೊಠಡಿಗಳು, ಕಟ್‌ಮೊಡೆಲ್ ಪ್ರಯೋಗಾಲಯ ಮತ್ತು ಸುಮಾರು 100 ಜನರಿಗಾಗಿ ವಸತಿ ಸೌಲಭ್ಯಗಳನ್ನು ಕಲ್ಪಿಸಲಾಗುವುದೆಂದು ತಿಳಿಸಿರುತ್ತಾರೆ. ಈ 3 ಚಾಲನಾ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಲು ಒಂದು ಕೇಂದ್ರಕ್ಕೆ ತಲಾ ರೂ. 5.00 ಕೋಟಿಗಳಂತೆ ಒಟ್ಟು ರೂ. 15.00 ಕೋಟಿಗಳ ಅನುದಾನದ ಅವಶ್ಯಕತೆ ಇದ್ದು, 2012–13ನೇ ಸಾಲಿನಲ್ಲಿ ಕಾರ್ಮಿಕ ಇಲಾಖೆಯ ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಉಪಯೋಜನೆ ಅಡಿಯಲ್ಲಿ ಒದಗಿಸಲಾದ ಆಯವ್ಯಯದಲ್ಲಿ ಇದನ್ನು ಒದಗಿಸುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಗೆ ಸಮಾಜ ಕಲ್ಯಾಣ ಇಲಾಖೆ, ಆರ್ಥಿಕ ಇಲಾಖೆ ಮತ್ತು ಸಚಿವ ಸಂಪುಟದ ಅನುಮೋದನೆ ಪಡೆದು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 143 ಇಟಿಐ 2012 ಬೆಂಗಳೂರು, ದಿನಾಂಕ : 30/11/2012**

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ವತಿಯಿಂದ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಯುವಕರಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ, ಕೋಲಾರ ಜಿಲ್ಲೆಯ ಶ್ರೀನಿವಾಸಪುರ ಮತ್ತು ಚಿಕ್ಕಮಗಳೂರಿನಲ್ಲಿ ಚಾಲನಾ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಲು ಕಾರ್ಮಿಕ ಇಲಾಖೆಯ ಅಧೀನ ಇಲಾಖೆಯಾದ ಉದ್ಯೋಗ ಮತ್ತು ತರಬೇತಿ ಇಲಾಖೆಗೆ 2012–13ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಉಪಯೋಜನೆ ಅಡಿಯಲ್ಲಿ ಒದಗಿಸಲಾದ ಆಯವ್ಯಯದಲ್ಲಿ ₹ 15.00 ಕೋಟಿ (ಹದಿನೈದು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಿದೆ. ಈ ವೆಚ್ಚವನ್ನು ಲೆಕ್ಕಶೀರ್ಷಿಕೆ ಸಂಖ್ಯೆ: 2230–03–101–0–35–422 (ವಿಶೇಷ ಘಟಕ ಯೋಜನೆ) ಹಾಗೂ 423 (ಗಿರಿಜನ ಉಪಯೋಜನೆ) ಅಡಿ ಭರಿಸತಕ್ಕದ್ದು. ಈ ಮೊತ್ತವನ್ನು ಖಜಾನೆಯಿಂದ ಡ್ರಾ ಮಾಡಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ವ್ಯವಸ್ಥಾಪಕ ನಿರ್ದೇಶಕರಿಗೆ ಚೆಕ್ ಮೂಲಕ ವಿತರಿಸಲು ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರಿಗೆ ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 494 ವೆಚ್ಚ–9/2012 ದಿನಾಂಕ: 09/10/2012ರಲ್ಲಿ ನೀಡಿರುವ ಸಹಮತಿಯನ್ವಯ ಮತ್ತು ಸಚಿವ ಸಂಪುಟವು ಪ್ರಕರಣ ಸಂಖ್ಯೆ: ಸಿ:661/2012 ದಿನಾಂಕ: 06/11/2012ರ ಮೂಲಕ ನೀಡಿರುವ ಅನುಮೋದನೆಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ
**ಕೆ.ನಾಗರಾಜ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

**PR.2305**

**ಕಾರ್ಮಿಕ ಸಚಿವಾಲಯ**

**ವಿಷಯ:** 2012–13ನೇ ಸಾಲಿನಲ್ಲಿ ಮಂಗಳೂರು, ಬೆಳಗಾವಿ ಮತ್ತು ಹುಬ್ಬಳ್ಳಿಯಲ್ಲಿ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರ ಸಂ. ಡಿಇಟಿ/ಟಿಆರ್‌ಜಿ/ಎಂಎಸ್‌ಡಿಸಿ–ಬಿಇಎಲ್‌ಜಿ–ಎಂಎಲ್‌ಓಆರ್‌ಇ/ಸಿಆರ್–02/2012–13, ದಿನಾಂಕ: 05/06/2012.

**ಪ್ರಸ್ತಾವನೆ:**

ವೃತ್ತಿ ತರಬೇತಿ ರಂಗದಲ್ಲಿ ಕರ್ನಾಟಕವು 158 ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳು 195 ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳು ಮತ್ತು 1091 ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಮೂಲಕ 1,67,208 ವಿದ್ಯಾರ್ಥಿಗಳಿಗೆ 40 ವಿವಿಧ ವೃತ್ತಿಗಳಲ್ಲಿ ತರಬೇತಿಯನ್ನು ನೀಡುತ್ತಿದೆ. ಅಪ್ರೆಂಟಿಷಿಪ್ ತರಬೇತಿ ಸ್ಕೀಂನ ಅಡಿಯಲ್ಲಿ 34,000 ಸೀಟುಗಳ ಸಾಮರ್ಥ್ಯದೊಂದಿಗೆ 5,549 ಸಂಸ್ಥೆಗಳನ್ನು ದಾಖಲು ಮಾಡಿಕೊಳ್ಳಲಾಗಿದೆ. ಮಾಡ್ಯುಲಾರ್ ಎಂಪ್ಲಾಯೆಬಲ್ ಸ್ಕೀಂನ ಅಡಿಯಲ್ಲಿ 716 ನೊಂದಾಯಿತ ವೃತ್ತಿ ತರಬೇತಿ ಭಾಗೀದಾರರೊಂದಿಗೆ ಕೌಶಲ್ಯ ತರಬೇತಿಗಳನ್ನು ನೀಡಲಾಗುತ್ತಿದೆ. ತರಬೇತಿ ಸಾಮರ್ಥ್ಯ ಹಾಗೂ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್, ನಗರಾಭಿವೃದ್ಧಿ, ಜವಳಿ, ಪ್ರವಾಸೋದ್ಯಮ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ಸಮಾಜ ಕಲ್ಯಾಣ, ಕೈಗಾರಿಕೆ ಮತ್ತು ರೇಷ್ಮೆ ಮುಂತಾದ ಕ್ಷೇತ್ರ ಇಲಾಖೆಗಳಲ್ಲಿ ಲಭ್ಯವಿರುವ ಸ್ಕೀಂಗಳನ್ನು ಮತ್ತು

ಕೇಂದ್ರ ಸರ್ಕಾರದ ವೃತ್ತಿ ತರಬೇತಿ ನೀಡುವ ಸಂಸ್ಥೆಗಳನ್ನು ಗಮನದಲ್ಲಿಟ್ಟುಕೊಂಡು 2012–13ನೇ ಸಾಲಿನಲ್ಲಿ ಎಂಇಎಸ್ ಸ್ಕೀಂನ ಅಡಿಯಲ್ಲಿ 1,00,000 ಜನರಿಗೆ ತರಬೇತಿ ನೀಡಲು ಕ್ರಿಯಾಯೋಜನೆಯನ್ನು ತಯಾರಿಸಲಾಗಿದೆ. 2012–13ನೇ ಸಾಲಿನ ಆಯವ್ಯಯದಲ್ಲಿ 4,50,000 ಜನರಿಗೆ ವಿವಿಧ ವೃತ್ತಿಯಲ್ಲಿ ತರಬೇತಿ ನೀಡುವ ಮಹಾತ್ವಾಕಾಂಕ್ಷೆಯ ಗುರಿಯನ್ನು ಇಟ್ಟುಕೊಳ್ಳಲಾಗಿದೆ.

ತರಬೇತಿ ನೀಡುವ ಸಂಸ್ಥೆಗಳು ಮತ್ತು ತರಬೇತಿ ಪಡೆಯುವ ಅಭ್ಯರ್ಥಿಗಳ ಸಂಖ್ಯೆಯು ಗಣನೀಯವಾಗಿ ಹೆಚ್ಚಳವಾಗುತ್ತ ಹೋಗುತ್ತಿದ್ದಂತೆ, ಕೈಗಾರಿಕೆಗಳ ಅವಶ್ಯಕತೆ ಹಾಗೂ ಬೇಡಿಕೆಗಳಿಗೆ ಅನುಗುಣವಾಗಿ ಕೆಲವೊಂದು ನಿರ್ದಿಷ್ಟ ಕ್ಷೇತ್ರಗಳಲ್ಲಿ ಮುಂದುವರೆದ ತಜ್ಞತೆಯ ತರಬೇತಿಯನ್ನು ನೀಡುವಂತಹ ಸಂಸ್ಥೆಗಳ ಅಗತ್ಯವು ಕಂಡು ಬರುತ್ತಿದೆ. ಆ ಪ್ರಕಾರ ಬೆಂಗಳೂರು ಹಾಗೂ ಗುಲ್ಬರ್ಗಾದಲ್ಲಿ ₹ 40 ಕೋಟಿ ವೆಚ್ಚದಲ್ಲಿ ಜರ್ಮನಿಯ ಜಿಐಜೆಡ್–ಐಎಸ್ ಸಂಸ್ಥೆಯ ತಾಂತ್ರಿಕ ಸಹಾಯದೊಂದಿಗೆ ಅ) ಆಟೋಮೋಟಿವ್ ಮೆಕಾಟ್ರಾನಿಕ್ಸ್, ಆ) ಟೂಲ್ & ಡೈ ಪ್ರಿಸಿಷನ್ ಮ್ಯಾನುಫ್ಯಾಕ್ಚರಿಂಗ್, ಇ) ಎಲೆಕ್ಟ್ರಾನಿಕ್ ಡಿಸೈನಿಂಗ್ ಮತ್ತು ಮ್ಯಾನುಫ್ಯಾಕ್ಚರಿಂಗ್, ಈ) ಇಂಡಸ್ಟ್ರೀಸ್ ಆಟೋಮೇಷನ್, ಉ) ಎನ್ವಾಯರ್‌ಮೆಂಟಲ್ ಇಂಜಿಯರಿಂಗ್. ಊ) ಕಂಸ್ಟ್ರಕ್ಷನ್, ಋ) ಮ್ಯಾನುಫ್ಯಾಕ್ಚರಿಂಗ್ & ಟೂಲ್ & ಡೈ ಮೇಕಿಂಗ್, ಎ) ಎಲೆಕ್ಟ್ರಿಕಲ್ & ಎಲೆಕ್ಟ್ರಾನಿಕ್ ಮೈಟೆನೆನ್ಸ್, ಏ) ರೆಫ್ರಿಜರೇಷನ್ ಮತ್ತು ಏರ್‌ಕಂಡೀಷನಿಂಗ್, ಐ) ಅಡ್ವಾನ್ಸ್ಡ್ ವೆಲ್ಡಿಂಗ್ ವೃತ್ತಿಗಳಲ್ಲಿ ಮುಂದುವರೆದ ತಜ್ಞ ತರಬೇತಿಯನ್ನು ನೀಡುವ ಸಲುವಾಗಿ ಎರಡು ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು ತೆರೆಯಲಾಗಿದ್ದು, ಈ ಎರಡು ಕೇಂದ್ರಗಳು ಫೆಬ್ರವರಿ 2012ರಿಂದ ತಾತ್ಕಲಿಕ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಈ ಎರಡು ಬಹುಕೌಶಲ್ಯ ಅಭಿವೃದ್ಧಿ ಕೇಂದ್ರಗಳ ತರಬೇತಿ ಕಾರ್ಯಕ್ರಮವು ವಿದ್ಯಾರ್ಥಿ ವರ್ಗಗಳಿಂದ ಹಾಗೂ ಕೈಗಾರಿಕೆಗಳಿಂದ ಅತ್ಯುತ್ತಮವಾದ ಪ್ರತಿಕ್ರಿಯೆಯನ್ನು ಪಡೆದಿರುತ್ತದೆ.

ಕೇಂದ್ರ ಸರ್ಕಾರದ ಯೋಜನಾ ಆಯೋಗವು ಬೆಂಗಳೂರು ಹಾಗೂ ಗುಲ್ಬರ್ಗಾದಲ್ಲಿರುವ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರಗಳಿಗೆ 32.23 ಕೋಟಿ ರೂಪಾಯಿಗಳ ಆರ್ಥಿಕ ಸಹಾಯವನ್ನು ನೀಡಲು ಒಪ್ಪಿಕೊಂಡಿರುತ್ತದೆ ಮತ್ತು ಬಹುಕೌಶಲ್ಯ ಅಭಿವೃದ್ಧಿ ಕೇಂದ್ರ ಯೋಜನೆಯನ್ನು ಕೇಂದ್ರ ಪ್ರಾಯೋಜಿತ ಯೋಜನೆಯನ್ನಾಗಿ ಇಡೀ ದೇಶದಲ್ಲಿ ಅಳವಡಿಸಲು ಸಲಹೆ ನೀಡಿರುತ್ತದೆ. ಅಲ್ಲದೇ, ಡಿಜಿಇಟಿ, ಉದ್ಯೋಗ ಮತ್ತು ತರಬೇತಿ ಮಂತ್ರಾಲಯ, ಕೇಂದ್ರ ಸರ್ಕಾರವು ಎಲ್ಲಾ ರಾಜ್ಯಗಳಲ್ಲಿ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರವನ್ನು ಸ್ಥಾಪಿಸುವಂತೆಯೂ ಕಟ್ಟಡ, ಉಪಕರಣ ಮತ್ತು ಯಂತ್ರೋಪಕರಣಗಳ ಶೇ. 50ರಷ್ಟು ವೆಚ್ಚವನ್ನು ಕೇಂದ್ರ ಸರ್ಕಾರವು ಭರಿಸುತ್ತದೆ ಎಂದು ತಿಳಿಸಿರುತ್ತದೆ.

ಬೆಂಗಳೂರು ಮತ್ತು ಗುಲ್ಬರ್ಗಾದಲ್ಲಿನ ಬಹುಕೌಶಲ್ಯ ಅಭಿವೃದ್ಧಿ ಕೇಂದ್ರಗಳು ಗಳಿಸಿದ ಅತ್ಯುತ್ತಮ ಪ್ರತಿಕ್ರಿಯೆಗಳ ಕಾರಣದ ಹಿನ್ನೆಲೆಯಲ್ಲಿ ಬೆಳಗಾವಿ, ಹುಬ್ಬಳ್ಳಿ ಮತ್ತು ಮಂಗಳೂರಿನಲ್ಲಿ ಜರ್ಮನಿಯ ಜಿಐಜೆಡ್–ಐಎಸ್ ಸಂಸ್ಥೆಯ ತಾಂತ್ರಿಕ ಸಹಕಾರದೊಂದಿಗೆ ಇನ್ನು ಮೂರು ಬಹುಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು ತೆರೆಯಲು ಉದ್ದೇಶಿಸಲಾಗಿದೆ. ಮಂಗಳೂರು ಮತ್ತು ಬೆಳಗಾವಿ ಕೇಂದ್ರಗಳ ಯೋಜನೆಯ ವಿವರ ಈ ಕೆಳಗಿನಂತಿದೆ.

(ಲಕ್ಷ ರೂ.ಗಳಲ್ಲಿ)

| ಕ್ರ.ಸಂ. | ವಿಷಯ | ಬಹುಕೌಶಲ್ಯ ಅಭಿವೃದ್ಧಿ ಕೇಂದ್ರ ಮಂಗಳೂರು | ಬಹುಕೌಶಲ್ಯ ಅಭಿವೃದ್ಧಿ ಕೇಂದ್ರ ಬೆಳಗಾಂ | ಒಟ್ಟು |
|---|---|---|---|---|
| 1 | ಭೂಮಿ | ಕೈಗಾರಿಕಾ ತರಬೇತಿ ಸಂಸ್ಥೆ ಮಂಗಳೂರು ಇಲ್ಲಿ ಲಭ್ಯವಿದೆ. | ಕೈಗಾರಿಕಾ ತರಬೇತಿ ಸಂಸ್ಥೆ ಉದ್ಯಾಂಭಾಗ್, ಬೆಳಗಾಂ ಇಲ್ಲಿ ಲಭ್ಯವಿದೆ. | –– |
| 2 | ಕಟ್ಟಡ | 850.00 | 850.00 | 1700.00 |
| 3 | ಯಂತ್ರೋಪಕರಣ ಮತ್ತು ತರಬೇತಿ ಸಲಕರಣೆಗಳು | 1900.00 | 2200.00 | 4100.00 |
| 4 | ಯೋಜನಾ ನಿರ್ವಹಣೆ ಮತ್ತು ಜಿಐಜೆಡ್–ಐಎಸ್ ಸಂಸ್ಥೆಗೆ ನೀಡಬೇಕಾದ ಅನುಷ್ಠಾನ ವೆಚ್ಚ. | 412.50 | 457.50 | 870.00 |
| 5 | ಮೊದಲ 3 ವರ್ಷದ ಕಾರ್ಯ ನಿರ್ವಹಣಾ ವೆಚ್ಚ. | 500.00 | 500.00 | 1000.00 |
| 6 | ಹೆಚ್ಚುವರಿ ಕೋರ್ಸ್‌ಗಳಿಗೆ ಬಂಡವಾಳ ಹೂಡಿಕೆಗಾಗಿ ಕಾಯ್ದಿಡುವ ಮೊತ್ತ | 65.00 | 65.00 | 130.00 |
| | **ಒಟ್ಟು** | **3727.50** | **4072.50** | **7800.00** |

ಈ ಮೂರು (ಹುಬ್ಬಳ್ಳಿ ಕೇಂದ್ರ ಸೇರಿ) ಬಹುಕೌಶಲ್ಯ ಅಭಿವೃದ್ಧಿ ಕೇಂದ್ರದಲ್ಲಿ (i) ಕನ್‌ಸ್ಟ್ರಕ್ಷನ್ ಟೆಕ್ನಾಲಜಿ, (ii) ಅಡ್ವಾನ್ಸ್‌ಡ್ ವೆಲ್ಡಿಂಗ್ ಟೆಕ್ನಾಲಜಿ, (iii) ಇನ್‌ಫರ್‌ಮೇಶನ್ ಟೆಕ್ನಾಲಜಿ (iv) ಟೂಲ್ ರೂಮ್ ಅಂಡ್ ಪ್ರೆಸಿಷನ್ ಮ್ಯಾನುಫ್ಯಾಕ್ಚರಿಂಗ್ (v) ಇಂಡಸ್ಟ್ರಿಯಲ್ ಆಟೋಮೇಷನ್ ಅಂಡ್ (vi) ಇನ್‌ಫರ್‌ಮೇಷನ್ ಟೆಕ್ನಾಲಜಿ (vii) ಇಂಡಸ್ಟ್ರಿಯಲ್ ಮೆಕಾಟ್ರಾನಿಕ್ಸ್ ಅಡಿ ವಿವಿಧ ವೃತ್ತಿಗಳಲ್ಲಿ ತರಬೇತಿ ನೀಡಲು ಉದ್ದೇಶಿಸಲಾಗಿದೆ. ಬಹುಕೌಶಲ್ಯ ಅಭಿವೃದ್ಧಿ ಕೇಂದ್ರಗಳು 3ನೇ ವರ್ಷದ ಕಾರ್ಯಾಚರಣೆಯ ಅಂತ್ಯದಲ್ಲಿ ಆವರ್ತಕ ವೆಚ್ಚದ ಶೇ. 100ರಷ್ಟು ವೆಚ್ಚವನ್ನು ಹಿಂಪಡೆಯುವ ಸಾಮರ್ಥ್ಯವನ್ನು ಗಳಿಸುತ್ತವೆ ಎನ್ನುವುದಾಗಿ ನಿರೀಕ್ಷಿಸಲಾಗಿದೆ. ಮೇಲಿನ ಪಟ್ಟಿಯಲ್ಲಿ ತೋರಿಸಲಾದ 78.00 ಕೋಟಿ ರೂಪಾಯಿಗಳ ವೆಚ್ಚವನ್ನು 50:50 ಅನುಪಾತದಲ್ಲಿ ಭರಿಸಲು ಕೇಂದ್ರ ಸರ್ಕಾರವನ್ನು ಕೋರಲಾಗುವುದು.

ಈ ಪ್ರಸ್ತಾವನೆಯ ಬಗ್ಗೆ ಯೋಜನಾ ಇಲಾಖೆಯು ಈ ಕೆಳಗಿನ ಸಲಹೆ / ನಿಬಂಧನೆಗಳೊಂದಿಗೆ ಸಹಮತಿಯನ್ನು ನೀಡಿದೆ.

1. To ensuring that the frame work for Skill Development based on Modular Employable Skills. Most of the existing skill development programmes are long term in nature. Poor and less educated persons cannot afford long term training

programmes due to higher entry qualifications, opportunity cost, etc. Therefore, a new framework for skill development has been evolved by the skill development and demand driven short term training courses based on modular employable skills decided in consultation with Industries. Flexible delivery mechanism, different levels of programmes to meet demands of various target groups.

2. To need identifying areas where such manpower and skill gaps are critical, and developing focused action plans to improve the situation.

3. Identification of Employable Skills set in a sector based on division of work in the Labour market. Development of detailed curriculum and vetting by a trade committee.

4. The administrative department has proposed for operational costs for two centres of Rs 10.00 crores for 3 years as corpus fund. It should be treated as one time grant.

ಯೋಜನಾ ಇಲಾಖೆಯು ವಿಧಿಸಿರುವ ಮೇಲಿನ ನಾಲ್ಕು (4) ಸಲಹೆ / ನಿಬಂಧನೆಗಳನ್ನು (ಆಡಳಿತ ಇಲಾಖೆಯ ಕಡತದ ಕಂಡಿಕೆ 27ರಂತೆ) ಆಡಳಿತ ಇಲಾಖೆಯು ಪಾಲಿಸಬೇಕೆಂಬ ಷರತ್ತಿನೊಂದಿಗೆ ಈ ಯೋಜನೆಗೆ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ.

ಈ ಮೇಲಿನ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 153 ಇಟಿಐ 2012 ಬೆಂಗಳೂರು, ದಿನಾಂಕ : 02/11/2012**

ಈ ಮೇಲಿನ ಪ್ರಸ್ತಾವನೆಯಂತೆ ಬೆಳಗಾವಿ, ಹುಬ್ಬಳ್ಳಿ ಹಾಗೂ ಮಂಗಳೂರು ಈ ಮೂರು ಸ್ಥಳಗಳಲ್ಲಿ ಕರ್ನಾಟಕ ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು 2012–13ನೇ ಸಾಲಿನಲ್ಲಿ ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಎರಡು ಬಹು ಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸಲು ಬೇಕಾಗುವ ಒಟ್ಟು ₹78.00 ಕೋಟಿ (ಎಪ್ಪತ್ತೆಂಟು ಕೋಟಿ ರೂಪಾಯಿಗಳು ಮಾತ್ರ)ಗಳ ಜೊತೆ ಮೂರನೇ ಕೇಂದ್ರಕ್ಕೂ ಸಹ ಹೆಚ್ಚುವರಿ ಅನುದಾನವನ್ನು ಒದಗಿಸಿಕೊಂಡು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಪಿಡಿ 46 ಎಂಇ 2012 ದಿನಾಂಕ 17/08/2012 ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 440 ವೆಚ್ಚ–9/12, ದಿನಾಂಕ 22/09/2012 ರಲ್ಲಿ ನೀಡಿರುವ ಸಹಮತಿಯನ್ವಯ ಮತ್ತು ಸಚಿವ ಸಂಪುಟವು ಪ್ರಕರಣ ಸಂಖ್ಯೆ: ಸಿ:565/2012 ದಿನಾಂಕ: 16/10/2012ರ ಮೂಲಕ ನೀಡಿರುವ ಅನುಮೋದನೆಯ ಅನ್ವಯ ಹೊರಡಿಸಲಾಗಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಪ್ರಸ್ತಾವನೆಯಲ್ಲಿ ಹೇಳಲಾಗಿರುವ ಯೋಜನಾ ಇಲಾಖೆಯು ನೀಡಿರುವ ಸಲಹೆ / ನಿಬಂಧನೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ
**ಕೆ.ನಾಗರಾಜ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

**PR.2304**

## ಇಂಧನ ಸಚಿವಾಲಯ

**ವಿಷಯ:** ಮೆ॥ ಅಸೋಸಿಯೇಟ್ ಡೆಕಾರ್ ಲಿಮಿಟೆಡ್ (ಹಿಂದಿನ ಹೆಸರು ಮೆ॥ ಸ್ಟಾರ್ ಪ್ಯನೆಲ್ ಬೋರ್ಡ್ಸ್ ಲಿಮಿಟೆಡ್) ಇವರು ಮಾಲೂರು ಕೈಗಾರಿಕಾ ಪ್ರದೇಶ, ಕೋಲಾರ ಜಿಲ್ಲೆ ಇಲ್ಲಿ ಸ್ಥಾಪಿಸಿರುವ ಘಟಕಕ್ಕೆ ವಿದ್ಯುಚ್ಛಕ್ತಿ ತೆರಿಗೆ ರಿಯಾಯಿತಿಯನ್ನು ನೀಡುವ ಬಗ್ಗೆ.

**ಓದಲಾಗಿದೆ:**
1. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಐ 289 ಎಸ್‌ಪಿಐ 2011 ದಿನಾಂಕ: 28.09.2012.
2. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಐ 289 ಎಸ್‌ಪಿಐ 2011 ದಿನಾಂಕ: 11.07.2012.
3. ಮೆ॥ ಅಸೋಸಿಯೇಟ್ ಡೆಕಾರ್ ಲಿಮಿಟೆಡ್ ಇವರ ಮನವಿ ಪತ್ರ ದಿನಾಂಕ: 09.07.2012.
4. ಸರ್ಕಾರಿ ಆದೇಶ ಸಂಖ್ಯೆ: ಸಿಐ 289 ಎಸ್‌ಪಿಐ 2011 ದಿನಾಂಕ: 05.06.2012.
5. ದಿನಾಂಕ: 29.05.2012 ರಂದು ನಡೆದ ಅಧಿಕಾರಯುಕ್ತ ಸಚಿವ ಸಂಪುಟದ ಉಪ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಮೆ॥ ಅಸೋಸಿಯೇಟ್ ಡೆಕಾರ್ ಲಿಮಿಟೆಡ್ (ಹಿಂದಿನ ಹೆಸರು ಮೆ॥ ಸ್ಟಾರ್ ಪ್ಯನೆಲ್ ಬೋರ್ಡ್ಸ್ ಲಿಮಿಟೆಡ್) ಇವರು ಮಾಲೂರು ಕೈಗಾರಿಕಾ ಪ್ರದೇಶ, ಕೋಲಾರ ಜಿಲ್ಲೆ ಇಲ್ಲಿ ಪಾರ್ಟಿಕಲ್ ಬೋರ್ಡ್ಸ್, ಲ್ಯಾಮಿನೇಷನ್ ಮುಂತಾದವುಗಳನ್ನು ಉತ್ಪಾದಿಸುವ ಘಟಕವನ್ನು ಸ್ಥಾಪಿಸಿದ್ದು, ಸದರಿ ಘಟಕಕ್ಕೆ ಸರ್ಕಾರಿ ಆದೇಶ ಸಂಖ್ಯೆ: ಸಿಐ 289 ಎಸ್‌ಪಿಐ 2011 ದಿನಾಂಕ: 05.06.2012 ರಲ್ಲಿ ಕೆಲವು ವಿಶೇಷ ರಿಯಾಯಿತಿಗಳನ್ನು ನೀಡಲಾಗಿದೆ. ಆ ರಿಯಾಯಿತಿಗಳಲ್ಲಿ ಸದರಿ ಘಟಕಕ್ಕೆ ವಾಣಿಜ್ಯ ಉತ್ಪಾದನೆ ಪ್ರಾರಂಭಿಸಿದ ದಿನದಿಂದ ಮೊದಲ 5 ವರ್ಷಗಳವರೆಗೆ ಘಟಕವು ವಿದ್ಯುಚ್ಛಕ್ತಿ ಕಂಪನಿಗಳಿಂದ ಸರಬರಾಜುಗೊಂಡ ವಿದ್ಯುಚ್ಛಕ್ತಿ ಮೇಲೆ ಹಾಗೂ ಸ್ವ–ವಿದ್ಯುತ್ ಉತ್ಪಾದನೆಯ ವಿದ್ಯುಚ್ಛಕ್ತಿ ಮೇಲಿನ ಸುಂಕವನ್ನು ಪಾವತಿಸುವುದರಿಂದ ವಿನಾಯಿತಿಯನ್ನು ನೀಡಿರುವುದು ಸಹ ಒಂದಾಗಿದೆ. ಈ ವಿಶೇಷ ರಿಯಾಯಿತಿಗಳನ್ನು ದಿನಾಂಕ: 29.05.2012ರ ಅಧಿಕಾರಯುಕ್ತ ಸಚಿವ ಸಂಪುಟ ಸಮಿತಿಯಲ್ಲಿ ಶಿಫಾರಸ್ಸು ಮಾಡಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ತಮ್ಮ ಸರ್ಕಾರಿ ಆದೇಶ ಸಂಖ್ಯೆ: ಸಿಐ 289 ಎಸ್‌ಪಿಐ 2011 ದಿನಾಂಕ: 05.06.2012 ನ್ನು ಹಾಗೂ ತಿದ್ದುಪಡಿ ಆದೇಶ ದಿನಾಂಕ: 07.07.2012 ನ್ನು ಲಗತ್ತಿಸಿ ಮೆ॥ ಅಸೋಸಿಯೇಟ್ ಡೆಕಾರ್ ಲಿಮಿಟೆಡ್ ರವರಿಗೆ ವಿದ್ಯುಚ್ಛಕ್ತಿ ಮೇಲಿನ ಸುಂಕವನ್ನು ಪಾವತಿಸುವುದರಿಂದ ವಿನಾಯಿತಿ ನೀಡಬೇಕಾಗಿ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಮೆ॥ ಅಸೋಸಿಯೇಟ್ ಡೆಕಾರ್ ಲಿಮಿಟೆಡ್ ರವರು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆದೇಶವನ್ನು ಲಗತ್ತಿಸಿ ತಮ್ಮ ಘಟಕಕ್ಕೆ ವಿದ್ಯುಚ್ಛಕ್ತಿ ಸುಂಕ / ತೆರಿಗೆಯನ್ನು 5 ವರ್ಷಗಳ ಕಾಲ ವಿನಾಯಿತಿ ನೀಡಬೇಕಾಗಿ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಮೆ॥ ಅಸೋಸಿಯೇಟ್ ಡೆಕಾರ್ ಲಿಮಿಟೆಡ್ ರವರಿಗೆ ನೀಡಿರುವ ರಿಯಾಯಿತಿಯನ್ನು ಅಧಿಕಾರಯುಕ್ತ ಸಚಿವ ಸಂಪುಟದ ಉಪ ಸಮಿತಿಯಲ್ಲಿ ಅನುಮೋದಿಸಲಾಗಿದೆ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 67 ಸಿಎಸ್‌ಎಲ್ 2012 ದಿನಾಂಕ: 23.05.2012 ರಲ್ಲಿ ಸಹಮತಿಯನ್ನು ಪಡೆದು ಆದೇಶವನ್ನು ಹೊರಡಿಸಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಇಂಧನ ಇಲಾಖೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 97 ಇಬಿಎಸ್ 2011 ಬೆಂಗಳೂರು, ದಿನಾಂಕ: 05.11.2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮೆ॥ ಅಸೋಸಿಯೇಟ್ ಡೆಕಾರ್ ಲಿಮಿಟೆಡ್ ಇವರು ಮಾಲೂರು ಕೈಗಾರಿಕಾ ಪ್ರದೇಶ, ಕೋಲಾರ ಜಿಲ್ಲೆ ಇಲ್ಲಿ ಸ್ಥಾಪಿಸಿರುವ ಘಟಕಕ್ಕೆ ಅಧಿಕಾರಯುಕ್ತ ಸಚಿವ ಸಂಪುಟದ ಉಪ ಸಮಿತಿಯ ಶಿಫಾರಸ್ಸಿನಂತೆ ಹಾಗೂ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಆದೇಶದಂತೆ ಈ ಸಂಸ್ಥೆಯು ವಾಣಿಜ್ಯ ಉತ್ಪಾದನೆ ಕೈಗೊಂಡ ದಿನದಿಂದ 5 ವರ್ಷಗಳ ಅವಧಿಯವರೆಗೆ ವಿದ್ಯುಚ್ಛಕ್ತಿ ಕಂಪನಿಗಳಿಂದ ಪಡೆಯುವ ವಿದ್ಯುಚ್ಛಕ್ತಿ / ಸ್ವ–ವಿದ್ಯುತ್ ಉತ್ಪಾದನೆಯ ಮೇಲಿನ ಸುಂಕ/ ತೆರಿಗೆಯನ್ನು ಪಾವತಿಸುವುದರಿಂದ ವಿನಾಯಿತಿ ನೀಡಲಾಗಿದೆ. ಈ ಆದೇಶವನ್ನು ಕರ್ನಾಟಕ ವಿದ್ಯುಚ್ಛಕ್ತಿ (ಬಳಕೆ ಮೇಲಿನ ತೆರಿಗೆ), 1959 ರ ಕಲಂ 8ರ ಪ್ರಕಾರ ವಿನಾಯಿತಿ ನೀಡಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ

**ಸಮೀರ್ ಮಡಿಮನ್**

ಪೀಠಾಧಿಕಾರಿ,

ಇಂಧನ ಇಲಾಖೆ.

**PR.2189**

## ಇಂಧನ ಸಚಿವಾಲಯ

**ವಿಷಯ** : ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು, ಇವರ ಅಭಿಯೋಜನಾ ಮಂಜೂರಾತಿಯನ್ನು ನಿರಾಕರಿಸುವ ಬಗ್ಗೆ.

**ಓದಲಾಗಿದೆ** :

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ/ಸಿಆರ್2/ 2010 ಚಿಕ್ಕಮಗಳೂರು, ದಿನಾಂಕ: 24.02.2010.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010 ದಿನಾಂಕ: 26.04.2010.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010 (ಭಾಗ–1) ದಿನಾಂಕ: 08.12.2010.
4. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–5/ ಸಿಆರ್2/2010 ಚಿಕ್ಕಮಗಳೂರು, ದಿನಾಂಕ: 11.10.2010.
5. ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು ಇವರ ಸಮರ್ಥನ ಮನವಿ ದಿನಾಂಕ: 06.03.2010.
6. ಮಾನ್ಯ ಉಚ್ಚ ನ್ಯಾಯಾಲಯದ ಅಪೀಲು ಸಂಖ್ಯೆ: 713/1998ರ ಆದೇಶ.
7. ಕರ್ನಾಟಕ ಸರ್ಕಾರದ ನಡವಳಿಗಳ ಸಂಖ್ಯೆ: ಇಎನ್ 28 ಇಬಿಎಸ್ 2010 (ಭಾಗ–1) ದಿನಾಂಕ: 04.03.2011.
8. ಅಪರ ಪೋಲಿಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಅವರ ಪತ್ರ ಸಂಖ್ಯೆ: ಲೋಕ್/ ಐಎನ್‌ವಿ(ಜಿ)/ಎಂ–5/ಸಿಆರ್–2/2010 ಚಿಕ್ಕಮಗಳೂರು ದಿನಾಂಕ: 21.04.2012.

**ಪ್ರಸ್ತಾವನೆ:–**

1) ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಅಂಜುಂಪಾಷ, 1ನೇ ದರ್ಜೆ ಗುತ್ತಿಗೆದಾರರು, ಚಿಕ್ಕಮಗಳೂರು ಇವರು ನೀಡಿದ ಲಿಖಿತ ದೂರಿನನ್ವಯ ದಿನಾಂಕ: 10.02.2010 ರಂದು ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು ಇವರನ್ನು ಟ್ರ್ಯಾಪ್ ಮಾಡಿದ್ದು, ಲಂಚ ನಿರೋಧ ಕಾಯ್ದೆಯನುಸಾರ ನೋಂದಾಯಿಸಲ್ಪಟ್ಟ ಮೊಕದ್ದಮೆ ಸಂಖ್ಯೆ: 02/2010 ರಲ್ಲಿ ನಡೆಸಿದ ಕಾರ್ಯಾಚರಣೆಯ ಅನುಸಾರ ಸರ್ಕಾರಕ್ಕೆ ನೀಡಲಾಗಿದ್ದ ವರದಿಯ ಮೇರೆಗೆ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು ಇವರನ್ನು ಅಮಾನತಿನಲ್ಲಿಡಲು ತೀರ್ಮಾನಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಅಮಾನತಿನಲ್ಲಿಡಲಾಗಿತ್ತು.

2) ಶ್ರೀ ಅಂಜುಂಪಾಷ ರವರ ಫಿರ್ಯಾದು ಏನೆಂದರೆ ತನ್ನ ಎಲೆಕ್ಟ್ರಿಕಲ್ ಕಂಟ್ರಕ್ಟರ್ ಲೈಸೆನ್ಸ್‌ನ್ನು ನವೀಕರಿಸಿ ಕೊಳ್ಳುವ ಸಂಬಂದವಾಗಿ ನವೀಕರಣಕ್ಕಾಗಿ ಕೋರಿ ಅರ್ಜಿ ಹಾಗೂ ನವೀಕರಣ ಶುಲ್ಕ ರೂ.425/–ಗಳೊಂದಿಗೆ (ಎಜಿಐ) ಕಛೇರಿಗೆ ಹೋದಾಗ ಆಪಾದಿತ ಸರ್ಕಾರಿ ನೌಕರರು ರೂ.500/–ಗಳ ಲಂಚವನ್ನು ನೀಡುವಂತೆ ಒತ್ತಾಯಿಸಿರುತ್ತಾರೆ ಎಂಬುದಾಗಿದೆ.

3) ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಂತೆ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು ಇವರ ವಿರುದ್ಧ ಇಡಲಾಗಿರುವ ಟ್ರ್ಯಾಪ್ ಪ್ರಕರಣ ಸಂಖ್ಯೆ: 02/2010 ರನ್ವಯ ಸಕ್ಷಮ ನ್ಯಾಯಾಲಯದಲ್ಲಿ ಹೂಡಬಹುದಾದ ಪ್ರಕರಣದಲ್ಲಿ ಆಗಬಹುದಾದ ಅಂತಿಮ ತೀರ್ಮಾನವನ್ನು ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್‌ಸ್ಥಾಪಿಸಲಾಯಿತು.

4) ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಚಿಕ್ಕಮಗಳೂರು ಇವರ ವಿರುದ್ಧದ ಪ್ರಕರಣದಲ್ಲಿ ಭ್ರಷ್ಟಚಾರ ಲಂಚ ನಿರ್ಮೂಲನ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಗೆ 13 (2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನ ಕಾಯ್ದೆ 1988ರ ಕಲಂ 19 (1) (ಬಿ) ರನ್ವಯ ಅಭಿಯೋಜನಾ ಮಂಜೂರಾತಿ ನೀಡಲು ಕೋರಿದ್ದರು.

5) ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿಯವರು ತನ್ನ ಪರ ಸಮರ್ಥನೆಯ ಮನವಿಯಲ್ಲಿ ಶ್ರೀ ಅಂಜುಂ ಪಾಷರವರು ದಿನಾಂಕ: 02.02.2010 ರಂದು ಲೈಸೆನ್ಸ್ ನವೀಕರಣಕ್ಕಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲವೆಂದೂ ಹಾಗೂ ತನ್ನ ದೂರಿನಲ್ಲಿ ತಿಳಿಸಿರುವಂತೆ ಆ ದಿನದಂದು ರೂ.425/–ಗಳ ನವೀಕರಣ ಶುಲ್ಕವನ್ನಾಗಲೀ ಅವರು ಪಾವತಿಸಿರುವುದಿಲ್ಲವೆಂತಲೂ ತಿಳಿಸಿರುತ್ತಾರೆ. ಅದನ್ನು ಮುಂದುವರಿಸುತ್ತಾ ದಿನಾಂಕ: 10.02.2010 ರವರೆಗೆ ಅಂದರೆ ಟ್ರ್ಯಾಪ್ ಕಾರ್ಯಾಚರಣೆ ದಿನಾಂಕದವರೆಗೆ ಫಿರ್ಯಾದುದಾರರು ಲೈಸೆನ್ಸ್ ನವೀಕರಣಕ್ಕಾಗಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲವೆಂಬ ಅಂಶವನ್ನು ಸಹ ಅವರು ಗಮನಕ್ಕೆ ತಂದಿರುತ್ತಾರೆ. ಫಿರ್ಯಾದುದಾರರು ದಿನಾಂಕ: 23.02.2010 ರಂದು ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರಿಗೆ ಬರೆದ ಪತ್ರದಲ್ಲಿ ತಾನು ರೂ.425/–ಗಳನ್ನು ನವೀಕರಣ ಶುಲ್ಕದ ಬಾಬ್ತು ಪಾವತಿಸಿರುವುದಾಗಿ ತಿಳಿಸಿರುತ್ತಾರೆ ಮತ್ತು ದಿನಾಂಕ: 24.02.2010 ರಂದು ವಾಸ್ತವವಾಗಿ ಈ ಮೊತ್ತವನ್ನು ಚಿಕ್ಕಮಗಳೂರು ಶಾಖೆಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿಗೆ ಪಾವತಿಸಿರುತ್ತಾರೆ. ಆದಕಾರಣ ಈ ಫಿರ್ಯಾದಿಗೆ ಯಾವ ಆಧಾರವೂ ಇಲ್ಲವೆಂದೂ, ಇದನ್ನು ದುರುದ್ದೇಶಪೂರ್ವಕವಾಗಿ ಮಾಡಲಾಗಿದೆಯೆಂದೂ ಆಪಾದಿತ ಸರ್ಕಾರಿ ಅಧಿಕಾರಿ (ಎಜಿಓ) ಹೇಳಿರುತ್ತಾರೆ.

6) ಮೇಲೆ ಆಪಾದಿತರು ತಿಳಿಸಿರುವಂತೆ ಪರಿಶೀಲಿಸಲಾಗಿ ಕಛೇರಿಯಲ್ಲಿ ನಿರ್ವಹಣೆ ಮಾಡಿರುವ ರಿಜಿಸ್ಟರಿನ ಅವಗಾಹನೆಯಿಂದ ಕಂಡುಬರುವಂತೆ ಫಿರ್ಯಾದುದಾರರು ಹೇಳಿಕೊಳ್ಳುವ ರೀತಿಯಲ್ಲಿ ದಿನಾಂಕ: 02.02.2010 ರಂದು ನವೀಕರಣ ಕೋರಿಕೆಯ ಅರ್ಜಿಯು ನೋಂದಣಿಯಾಗಿರುವುದಿಲ್ಲ. ಅಲ್ಲದೇ ವಾಸ್ತವಿಕ ನವೀಕರಣ ಶುಲ್ಕ ರೂ.425/–ಗಳನ್ನು ಟ್ರ್ಯಾಪ್ ದಿನಾಂಕದ ನಂತರ ಅಂದರೆ ದಿನಾಂಕ: 24.02.2010 ರಂದು ಚಿಕ್ಕಮಗಳೂರು ಶಾಖೆಯ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿಗೆ ಜಮಾ ಮಾಡಲಾಗಿರುವುದನ್ನು ಗಮನಿಸಲಾಯಿತು.

7) ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ಕ್ರಿಮಿನಲ್ ಅಪೀಲ್ ಸಂಖ್ಯೆ: 713/1998 ರ ಜಿ.ಡಿ. ಮರಿಸ್ವಾಮಿ ವರ್ಸಸ್ ಸ್ಟೇಟ್ ಆಫ್ ಕರ್ನಾಟಕ ಪ್ರಕರಣದಲ್ಲಿ ದಾಖಲಿಸಿರುವ "a person in his official capacity doing any favour arises only after all the formalities are completed" ಎಂಬ ಷರಾವನ್ನು ಕೂಡ ದೃಷ್ಟಿಯಲ್ಲಿಟ್ಟುಕೊಂಡು ಈ ಪ್ರಕರಣವನ್ನು ಕೂಡ ತಾಂತ್ರಿಕವಾಗಿ, ನವೀಕರಣ ಶುಲ್ಕವನ್ನು ಪಾವತಿ ಮಾಡದ ಹೊರತು ಉಪ ವಿದ್ಯುತ್ ಪರಿವೀಕ್ಷಕರು ಪ್ರಕರಣವನ್ನು ಲೈಸೆನ್ಸ್ ನವೀಕರಣಕ್ಕಾಗಿ ಕಳುಹಿಸಿಕೊಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ ಎಂಬುದನ್ನು ಗಮನಿಸಲಾಯಿತು. ಫಿರ್ಯಾದುದಾರನು ಲೋಕಾಯುಕ್ತ ಪೋಲಿಸರಿಗೆ ನೀಡಿದ ತನ್ನ ದಿನಾಂಕ: 10.02.2010 ರ ಪತ್ರದಲ್ಲಿ ತಾನು ರೂ.425.00 ಗಳ ನವೀಕರಣ ಶುಲ್ಕ ಪಾವತಿಸಿರುವುದಾಗಿ ತಿಳಿಸಿರುತ್ತಾರೆ. ಆದಾಗ್ಯೂ, ಚಲನ್ ಪ್ರತಿಯಲ್ಲಿ ಕಂಡುಬರುವಂತೆ, ನವೀಕರಣ ಶುಲ್ಕವನ್ನು ದಿನಾಂಕ: 24.02.2010 ರಂದು ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿಗೆ ಜಮಾ ಮಾಡಲಾಗಿರುತ್ತದೆ. ಫಿರ್ಯಾದಿನಲ್ಲಿರುವ ಈ ವೈರುಧ್ಯವನ್ನು (inconsistency) ಪರಿಗಣಿಸಿ ಆಪಾದಿತ ಸರ್ಕಾರಿ ನೌಕರರನ್ನು ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಅನುಮತಿ ನೀಡಲು ಸಮರ್ಪಕ ಕಾರಣವಿಲ್ಲದ್ದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ಆದೇಶದಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಮಂಜೂರಾತಿ ನೀಡಬೇಕೆಂಬ ಕರ್ನಾಟಕ ಲೋಕಾಯುಕ್ತದ ಅಪರ ಪೊಲೀಸ್ ಮಹಾನಿರ್ದೇಶಕರ ಕೋರಿಕೆಯನ್ನು ಸರ್ಕಾರವು ಕೈಬಿಟ್ಟಿರುತ್ತದೆ.

8) ಮೇಲೆ ಓದಲಾದ ಕ್ರಮ ಸಂಖ್ಯೆ (8) ರಲ್ಲಿ ತಿಳಿಸಿರುವ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಸದರಿ ಪ್ರಕರಣಕ್ಕೆ ಸಂಬಂಧಪಟ್ಟಂತೆ ಲೋಕಾಯುಕ್ತ ಪೊಲೀಸ್ ಚಿಕ್ಕಮಗಳೂರು, ಇವರು ಆರೋಪಿ ಅಧಿಕಾರಿಯ ವಿರುದ್ಧ ಅಭಿಯೋಜನಾ ಮಂಜೂರಾತಿ ಆದೇಶವನ್ನು ನಿರಾಕರಿಸಿರುವ ಹಿನ್ನೆಲೆಯಲ್ಲಿ ತಮ್ಮ ವರದಿ ದಿನಾಂಕ: 29.11.2011 ರಲ್ಲಿ ಮತ್ತಷ್ಟು ಸಾಕ್ಷ್ಯಾಧಾರಗಳನ್ನು ಸಂಗ್ರಹಿಸಿ ಕಳುಹಿಸಿರುವ ಮತ್ತೊಂದು ತನಿಖಾ ವರದಿಯನ್ನು ಲಗತ್ತಿಸಿ ಸದರಿ ವರದಿಯಲ್ಲಿನ ಅಂಶಗಳನ್ನು ಪರಿಶೀಲಿಸಿ ಆರೋಪಿ ಅಧಿಕಾರಿ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಇವರನ್ನು ಅಭಿಯೋಜನೆಗೆ ಒಳಪಡಿಸುವ ಸಂಬಂಧ ಅಭಿಯೋಜನಾ ಮಂಜೂರಾತಿ ಆದೇಶವನ್ನು ಕೋರಿರುತ್ತಾರೆ.

9) ಲೋಕಾಯುಕ್ತ ಪೊಲೀಸರವರು ಕಳುಹಿಸಿರುವ ಮತ್ತಷ್ಟು ವಿವರಗಳನ್ನು ಹಾಗೂ ತನಿಖಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ತನಿಖೆಯಲ್ಲಿ ಮುಖ್ಯವಾಗಿ ಚಿಕ್ಕಮಗಳೂರು ವಿದ್ಯುತ್ ಪರಿವೀಕ್ಷಣಾ ಕಚೇರಿಯಲ್ಲಿ ಅರ್ಜಿದಾರರು ನವೀಕರಣಕ್ಕೆ ಸಂಬಂದಿಸಿದಂತೆ ಸಲ್ಲಿಸುವ ಅರ್ಜಿಗಾಗಲಿ ಅಥವಾ ಅದಕ್ಕೆ ಸಂಬಂಧಪಟ್ಟಂತೆ ಕಟ್ಟುವ ಶುಲ್ಕಕ್ಕಾಗಲಿ ಹಿಂಬರಹ ಅಥವಾ ರಶೀದಿ ನೀಡದೆ ಇರುವುದನ್ನು ಉಲ್ಲೇಖಿಸಲಾಗಿದೆ. ಫಿರ್ಯಾದುದರರಿಗೆ ವಿದ್ಯುತ್ ಗುತ್ತಿಗೆದಾರರ ಪರವಾನಗಿ ನವೀಕರಣ ಆಗಬೇಕಾಗಿದ್ದು ಈಗಾಗಲೇ ನೀಡಿದ ರೂ.425/–ಗಳಿಗೆ ಆರೋಪಿ ಅಧಿಕಾರಿ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ ರವರಾಗಲಿ ಅಥವಾ ಪ್ರಥಮ ದರ್ಜೆ ಸಹಾಯಕ ಶ್ರೀ ಉಮ್ಮರ್ ಷರೀಫ್ ರವರು ರಶೀದಿ ಹಾಕದಿರುವುದರಿಂದ ಅನಿವಾರ್ಯವಾಗಿ ದಿನಾಂಕ: 24.02.2010 ರಂದು ಮತ್ತೊಮ್ಮೆ ಹಣ ಕಟ್ಟಲು ಉಪ ವಿದ್ಯುತ್ ಪರಿವೀಕ್ಷಕರ ಕಚೇರಿಗೆ ಹೋಗಿರುವುದಾಗಿ ಹಾಗೂ ಆರೋಪಿ ಅಧಿಕಾರಿ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ ರವರು ಉದ್ದೇಶ ಪೂರಕವಾಗಿ ಪ್ರಕರಣದಿಂದ ತಪ್ಪಿಸಿಕೊಳ್ಳುವ ಸಲುವಾಗಿ ರಶೀದಿ ಪುಸ್ತಕದಲ್ಲಿ ನಮೂದಿಸಿ ಹಣ ಕಟ್ಟಿಸಿಕೊಳ್ಳುವ ಸೌಲಭ್ಯ ಇದ್ದರೂ ಕೂಡ ಫಿರ್ಯಾದುದಾರರಿಗೆ ಚಲನ್ ಮುಖಾಂತರ ಬ್ಯಾಂಕಿಗೆ ಕಟ್ಟುವಂತೆ ಮೇಲುರುಜು ಮಾಡಿ ಸೀಲು ಮತ್ತು ಸಹಿ ಹಾಕಿ ಕೊಟ್ಟಿದ್ದರಿಂದ ಫಿರ್ಯಾದುದಾರರು ನವೀಕರಣದ ಶುಲ್ಕ ರೂ.425/–ಗಳನ್ನು ದಿನಾಂಕ: 24.02.2010 ರಂದು ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಚಿಕ್ಕಮಗಳೂರು ಶಾಖೆಯ ಮೂಲಕ ಪಾವತಿಸಿರುವುದಾಗಿ ಉಲ್ಲೇಖಿಸಲಾಗಿದೆ. ಹಾಗೂ ಆ ಸಾಲಿನಲ್ಲಿ ಸ್ವೀಕರಿಸಿರುವ ಎಲ್ಲಾ 243 ಅರ್ಜಿಗಳಿಗೂ ಶುಲ್ಕವನ್ನು ರಶೀದಿ ಮೂಲಕ ಕಟ್ಟಿಸಿಕೊಂಡಿದ್ದು ಕೇವಲ ಫಿರ್ಯಾದುದಾರರ ಅರ್ಜಿಗೆ ಸಂಬಂಧಿಸಿದಂತೆ ಮಾತ್ರ ಈ ಒಂದು ಅರ್ಜಿಗೆ ಟ್ರಜರಿ ಚಲನ್

ಮೂಲಕ ಬ್ಯಾಂಕಿಗೆ ಹಣವನ್ನು ಕಟ್ಟಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ದಿನಾಂಕ: 02.02.2010 ರಂದು ಆರೋಪಿ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿಯವರು ಫಿರ್ಯಾದುದಾರರಿಂದ ಲೈಸನ್ಸ್ ನವೀಕರಣಕ್ಕೆ ಅರ್ಜಿ ದಾಖಲಾತಿಗಳೊಡನೆ ಲೈಸನ್ಸ್ ಶುಲ್ಕವನ್ನು ಪಡೆದಿರುತ್ತಾರೆ. ಮತ್ತು ಲೈಸನ್ಸ್ ನವೀಕರಣಕ್ಕೆ ಸಂಬಂಧಿಸಿದ ಅರ್ಜಿಯನ್ನು ಪ್ರಥಮ ದರ್ಜೆ ಸಹಾಯಕ ರವರಿಗೆ ಮಾರ್ಕ್ ಮಾಡಿ ನೀಡದೇ ತಮ್ಮ ಬಳಿಯಲ್ಲಿ ಇಟ್ಟುಕೊಂಡಿದ್ದರಿಂದ ದಿನಾಂಕ: 02.02.2010 ರಂದು ಪ್ರಥಮ ದರ್ಜೆ ಸಹಾಯಕ ರವರು ಸಾಮಾನ್ಯ ಸ್ವೀಕೃತಿಯಲ್ಲಿ ಫಿರ್ಯಾದುದಾರರ ಅರ್ಜಿಯನ್ನು ನಮೂದಿಸಿರುವುದಿಲ್ಲ ಎಂದು ಲೋಕಾಯುಕ್ತ ಪೋಲಿಸರು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ.

10) ಫಿರ್ಯಾದುದಾರರು ದಿನಾಂಕ: 02.02.2010 ರಂದು ನವೀಕರಣ ಶುಲ್ಕ ಹಾಗೂ ಅರ್ಜಿಯನ್ನು ಸಲ್ಲಿಸಿರುವುದಾಗಿ ತಿಳಿಸಿದ್ದರೂ ಸಹ ಪುನಃ ದಿನಾಂಕ: 24.02.2010 ರಂದು ನವೀಕರಣ ಶುಲ್ಕವನ್ನು ಪಾವತಿಸಲು ಮುಂದಾಗಿರುವುದಕ್ಕೆ ನೀಡಿರುವ ಕಾರಣಗಳು ಸಮರ್ಪಕವಾಗಿರುವುದಿಲ್ಲ. ಕಚೇರಿಯಲ್ಲಿ ರಶೀದಿ ಪುಸ್ತಕದಲ್ಲಿ ನಮೂದಿಸಿ ಶುಲ್ಕವನ್ನು ಕಟ್ಟಿಸಿಕೊಳ್ಳುವ ಸೌಲಭ್ಯವಿದ್ದರೂ ಸಹ ಫಿರ್ಯಾದುದಾರರಿಗೆ ಟ್ರಜರಿ ಚಲನ್ ಮೂಲಕ ಬ್ಯಾಂಕಿನಲ್ಲಿ ಹಣ ಕಟ್ಟಲು ಸೂಚಿಸಿರುವ ಬಗ್ಗೆ ಆಕ್ಷೇಪಿಸಲಾಗಿದೆ. ಆದರೆ ನವೀಕರಣ ಶುಲ್ಕವನ್ನು ಚಲನ್ ಮೂಲಕ ಬ್ಯಾಂಕಿನಲ್ಲಿ ಹಣ ಕಟ್ಟಿಸಿಕೊಂಡರೂ ಸಹ ಅದು ಕಾನೂನು ಬಾಹಿರವಾಗುವುದಿಲ್ಲ ಎಂದು ಭಾವಿಸಲಾಗಿದೆ. ಇಲ್ಲಿ ಯಾವ ರೀತಿ ನವೀಕರಣ ಶುಲ್ಕವನ್ನು ಪಾವತಿಸಿದರು ಎಂಬುದಕ್ಕಿಂತ ದಿನಾಂಕ: 24.02.2010 ರಂದು ಪಾವತಿಸಿದ್ದಾರೆಯೆ ಎಂಬ ಅಂಶವು ಈ ಪ್ರಕರಣದಲ್ಲಿ ಹೆಚ್ಚು ಪ್ರಸ್ತುತವಾಗುತ್ತದೆ.

11) ಮೇಲೆ ಓದಲಾದ (7)ರ ಆದೇಶದಲ್ಲಿ ಆರೋಪಿ ಅಧಿಕಾರಿಯ ಅಭಿಯೋಜನಾ ಮಂಜೂರಾತಿಯನ್ನು ಮುಖ್ಯವಾಗಿ "a person in his official capacity doing any favour arises only after all the formalities are completed" ಎಂಬ ಷರಾವನ್ನು ದೃಷ್ಠಿಯಲ್ಲಿಟ್ಟುಕೊಂಡು ಆಪಾದಿತ ಸರ್ಕಾರಿ ನೌಕರರನ್ನು ಅಭಿಯೋಜನೆಗೆ ಒಳಪಡಿಸಲು ಅನುಮತಿಯನ್ನು ನೀಡಿರುವುದಿಲ್ಲ. ಅದೇ ರೀತಿ ತಾಂತ್ರಿಕವಾಗಿ ನವೀಕರಣ ಶುಲ್ಕವನ್ನು ಪಾವತಿ ಮಾಡದ ಹೊರತು ಆರೋಪಿ ಅಧಿಕಾರಿಯು ಪ್ರಕರಣವನ್ನು ಲೈಸನ್ಸ್ ನವೀಕರಣಕ್ಕಾಗಿ ಕಳುಹಿಸುವ ಪ್ರಶ್ನೆ ಉದ್ಭವಿಸುವುದಿಲ್ಲ. ಅದರಂತೆ ದಿನಾಂಕ: 02.02.2010 ರಂದು ಫಿರ್ಯಾದುದಾರರು ಅರ್ಜಿಯನ್ನು ಹಾಗೂ ನವೀಕರಣ ಶುಲ್ಕವನ್ನು ಪಾವತಿ ಮಾಡಲು ಆರೋಪಿ ಅಧಿಕಾರಿಗೆ ನೀಡಿರುವುದಕ್ಕೆ ನಿರ್ದಿಷ್ಟ ದಾಖಲೆಯಾಗಲಿ ಅಥವಾ ನೇರ ಸಾಕ್ಷಿಯಾಗಲಿ ಕಂಡುಬರುವುದಿಲ್ಲ. ಆದ್ದರಿಂದ ಲೋಕಾಯುಕ್ತ ಪೋಲಿಸರು ತಮ್ಮ ಎರಡನೆ ತನಿಖಾ ವರದಿಯಲ್ಲಿ ಸಲ್ಲಿಸಿರುವ ದಾಖಲೆಗಳಲ್ಲಿ / ಸಾಕ್ಷ್ಯಾಧಾರಗಳಲ್ಲಿ ಸರ್ಕಾರವು ಈ ಹಿಂದೆ ಸದರಿ ಅಧಿಕಾರಿಯ ಅಭಿಯೋಜನೆಗೆ ಮಂಜೂರಾತಿಯನ್ನು ನಿರಾಕರಿಸಿದ ನಿರ್ಧಾರವನ್ನು ಬದಲಾಯಿಸಲು ಹೊಸದಾಗಿ ಯಾವುದೇ ಸಮರ್ಥ ಕಾರಣಗಳು ಕಂಡುಬರುವುದಿಲ್ಲ.

12) ಮೇಲಿನ ಪ್ರಸ್ತಾವನೆಯನ್ನು ಸಮಗ್ರವಾಗಿ ಪರಿಶೀಲಿಸಿ ಈಗಾಗಲೇ ಅಭಿಯೋಜನೆ ನಿರಾಕರಿಸುವ ಸರ್ಕಾರದ ನಿರ್ಧಾರವನ್ನು ಪುನರುಚ್ಛಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 28 ಇಬಿಎಸ್ 2010 (ಭಾಗ–1) ಬೆಂಗಳೂರು, ದಿನಾಂಕ: 22.11.2012**

ಲಂಚ ನಿರ್ಮೂಲನ ಕಾಯ್ದೆ 1988ರ ಕಲಂ 7, 13 (1) (ಡಿ) ಜೊತೆಗೆ 13 (2)ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಲಂಚ ನಿರ್ಮೂಲನ ಕಾಯ್ದೆ 1988ರ ಕಲಂ 19 (1) (ಬಿ)ರನ್ವಯ ಆಪಾದಿತರಾದ ಶ್ರೀ ಅಲ್ತಾಫ್ ಹುಸೇನ್ ಜಕಾರ್ತಿ, ಉಪ ವಿದ್ಯುತ್ ಪರಿವೀಕ್ಷಕರು, ಉಪ ವಿದ್ಯುತ್ ಪರಿವೀಕ್ಷಕರ ಕಛೇರಿ, ಚಿಕ್ಕಮಗಳೂರು ಇವರ ಪ್ರಕರಣ ಸಂಖ್ಯೆ: 02/2010ಕ್ಕೆ ಸಂಬಂಧಿಸಿದಂತೆ ಮತ್ತೊಂದು ತನಿಖಾ ವರದಿಯನ್ನು ಕಳುಹಿಸಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜಿಸಲು ಮಂಜೂರಾತಿ ನೀಡಬೇಕೆಂದು ಕರ್ನಾಟಕ ಲೋಕಾಯುಕ್ತದ ಅಪರ ಪೋಲಿಸ್ ಮಹಾನಿರ್ದೇಶಕರ ಕೋರಿಕೆಯನ್ನು ಪರಿಗಣಿಸುವ ಯಾವುದೇ ಸಮರ್ಥನೆ ಇಲ್ಲದಿರುವುದರಿಂದ ಸರ್ಕಾರವು ಈಗಾಗಲೇ ದಿನಾಂಕ: 04.03.2011ರ ಆದೇಶದಲ್ಲಿ ಅಭಿಯೋಜನಾ ಮಂಜೂರಾತಿ ನಿರಾಕರಿಸಿರುವ ನಿರ್ಧಾರವನ್ನು ಸರ್ಕಾರವು ಪುನರುಚ್ಚರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್**
ಪೀಠಾಧಿಕಾರಿ,
ಇಂಧನ ಇಲಾಖೆ.

PR.2213

## ಇಂಧನ ಸಚಿವಾಲಯ

**ವಿಷಯ** : ಶ್ರೀ ಜಿ.ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾ ಇಲಾಖೆ, ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಉಪ ಲೋಕಾಯುಕ್ತಕ್ಕೆ ವಹಿಸಿ ಆದೇಶ ಮಾಡುವ ಬಗ್ಗೆ.

**ಓದಲಾಗಿದೆ** :
1. ಹೆಚ್ಚುವರಿ ಪೋಲಿಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ರವರ ಪತ್ರ ಸಂಖ್ಯೆ: ಲೋಕಾ/ಐಎನ್‌ವಿ(ಜಿ)/ಸಿಟಿ/ಕ್ರೈಂ.52/2011 ದಿನಾಂಕ: 28.10.2011.
2. ಸರ್ಕಾರಿ ಆದೇಶ ಸಂಖ್ಯೆ: 116 ಎಬಿಎಸ್ 2011 ದಿನಾಂಕ: 21.11.2011.
3. ಸರ್ಕಾರಿ ಆದೇಶ ಸಂಖ್ಯೆ: 116 ಎಬಿಎಸ್ 2011 ದಿನಾಂಕ: 12.06.2012.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 146 ಇಬಿಎಸ್ 2011 ದಿನಾಂಕ: 13.01.2012.
5. ಅಪರ ನಿಬಂಧಕರು, ಕರ್ನಾಟಕ ಲೋಕಾಯುಕ್ತ ರವರ ಪತ್ರ ಸಂಖ್ಯೆ: ಕಂಪ್ಲೇಟ್/ಉಪಲೋಕ್/ಬಿಸಿಡಿ/1627/2012/ಎಆರ್‌ಇ–10 ದಿನಾಂಕ: 03.10.2012.

**ಪ್ರಸ್ತಾವನೆ:–**

ಶ್ರೀ ಜಿ.ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಇವರು ಉಪ ಮುಖ್ಯ ವಿದ್ಯುತ್ ಪರಿವೀಕ್ಷಕರ ಕಚೇರಿ, ಬೆಂಗಳೂರು ದಕ್ಷಿಣ, ಬಸವನಗುಡಿ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಶರಣಪ್ಪ.ಕೆ., ವಿದ್ಯುತ್ ಗುತ್ತಿಗೆದಾರರು, ಹೆಚ್.ಬಿ.ಸಿ.ಎಸ್., ಲಿ., ದ್ವಾರಕನಗರ, ವಾಜರಹಳ್ಳಿ, ಕನಕಪುರ ರಸ್ತೆ, ಬೆಂಗಳೂರು, ಇವರು ಶ್ರೀ ಹೆಚ್.ಆರ್.ಮಧುಸೂದನ್ ರೆಡ್ಡಿ ರವರಿಗೆ ಜಿಗಣಿ ಗ್ರಾಮದಲ್ಲಿನ ಕಾರ್ಖಾನೆಯ ವಿದ್ಯುತ್ ಸ್ಥಾವರವನ್ನು ಕಲ್ಪಿಸಲು ವಿದ್ಯುತ್ ಕಾಮಗಾರಿ

ಪರಿವೀಕ್ಷಣೆ ವರದಿ ನೀಡುವ ಕುರಿತು ರೂ.10,000/–ಗಳ ಅಕ್ರಮ ಸಂಭಾವನೆಯನ್ನು ಕೋರಿದ್ದಾರೆ ಎಂದು ಲೋಕಾಯುಕ್ತ ಪೋಲಿಸರಿಗೆ ನೀಡಿದ ದೂರಿನ ಮೇಲೆ ದಿನಾಂಕ: 24.10.2011 ರಂದು ಲೋಕಾಯುಕ್ತ ಪೋಲಿಸರು ಬೀಸಿದ ಟ್ರ್ಯಾಪ್‌ನಲ್ಲಿ ರೂ.10,000/–ಗಳ ಅಕ್ರಮ ಸಂಭಾವನೆ ಪಡೆಯುವಾಗ ಸಿಕ್ಕಿಹಾಕಿಕೊಂಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಟ್ರ್ಯಾಪ್ ಪ್ರಕರಣದಲ್ಲಿ ಶ್ರೀ ಜಿ.ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು, ಇವರ ವಿರುದ್ಧ ಭ್ರಷ್ಟಾಚಾರ ಲಂಚ ನಿರೋಧ ಕಾಯ್ದೆ 1988ರ ಕಲಂ 7, 13 (1) (ಡಿ) ಸಹವಾಚನ ಕಲಂ 13(2)ರ ಪ್ರಕಾರ ಬೆಂಗಳೂರು ಲೋಕಾಯುಕ್ತ ಠಾಣೆ, ಮೊಕದ್ದಮೆ ಸಂಖ್ಯೆ: 52/2011 ರಲ್ಲಿ ಪ್ರಕರಣವನ್ನು ದಾಖಲಿಸಿರುವುದಾಗಿ ವರದಿ ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಶ್ರೀ ಜಿ.ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮುಂದಿನ ಆದೇಶದವರೆಗೆ ಅಮಾನತಿನಲ್ಲಿಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಸರ್ಕಾರಿ ಆದೇಶದಲ್ಲಿ ಶ್ರೀ ಜಿ.ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಇವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಹೂಡಿರುವ ಹಾಗೂ ಅಂತಿಮ ಪ್ರಕರಣವನ್ನು ಬಾಕಿ ಇಟ್ಟು ಸೇವೆಗೆ ಪುನರ್ ಸ್ಥಾಪಿಸಲಾಗಿತ್ತು. ನಂತರ ಮೇಲೆ ಓದಲಾದ (4) ರ ಆದೇಶದಲ್ಲಿ ಶ್ರೀ ಜಿ.ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ಇವರನ್ನು ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1) (ಬಿ) ಜೊತೆಯಲ್ಲಿ ಕಲಂ 13 (2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988 ರ ನಿಯಮ 19 (1) (ಬಿ) ರನ್ವಯ ಮಂಜೂರಾತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರಲ್ಲಿ ಅಪರ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಈ ಪ್ರಕರಣದಲ್ಲಿ ಮಾನ್ಯ ಉಪ ಲೋಕಾಯುಕ್ತರವರು ಕಳುಹಿಸಿರುವ ವರದಿಯನ್ನು ಲಗತ್ತಿಸಿ ಸರ್ಕಾರದ ಮಟ್ಟದಲ್ಲಿ ಕ್ರಮ ಜರುಗಿಸಲು ತಿಳಿಸಿರುತ್ತಾರೆ. ಮಾನ್ಯ ಉಪ ಲೋಕಾಯುಕ್ತ ರವರ ವರದಿಯಲ್ಲಿ ಆಪಾದಿತ ಅಧಿಕಾರಿಯ ವಿರುದ್ಧ ಮಾಡಿರುವ ಆರೋಪವು ಮೇಲ್ನೋಟಕ್ಕೆ ನಿಜವೆಂದು ಕಂಡು ಬಂದಿರುವುದರಿಂದ ಅವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲು ವಿಚಾರಣೆಯನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14 (ಎ) ರ ಪ್ರಕಾರ ಉಪ ಲೋಕಾಯುಕ್ತರವರಿಗೆ ವಹಿಸಿಬೇಕಾಗಿ ಸೂಚಿಸಿರುತ್ತಾರೆ. ಮಾನ್ಯ ಉಪ ಲೋಕಾಯುಕ್ತರವರ ಶಿಫಾರಸ್ಸುಗಳನ್ನು ಪರಿಶೀಲಿಸಿದ ಸರ್ಕಾರವು ಈ ಸಂಬಂಧ ಪೂರ್ಣ ಪ್ರಮಾಣದ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರವರ ಮೂಲಕ ನಡೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 146 ಇಬಿಎಸ್ 2011 ಬೆಂಗಳೂರು, ದಿನಾಂಕ: 23.11.2012**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರಿಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14 (ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜಿ.ಗಿರೀಶ್, ಉಪ ವಿದ್ಯುತ್ ಪರಿವೀಕ್ಷಕರು, ವಿದ್ಯುತ್ ಪರಿವೀಕ್ಷಣಾ ಇಲಾಖೆ ಇವರ ವಿರುದ್ಧ ಮೇಲೆ ಹೇಳಿರುವ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತ ರವರ ಮೂಲಕ ನಡೆಸಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್**
ಪೀಠಾಧಿಕಾರಿ,
ಇಂಧನ ಇಲಾಖೆ.

**PR.2214**

## ಇಂಧನ ಸಚಿವಾಲಯ

**ವಿಷಯ:** 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012 ದಿನಾಂಕ 23.04.2012, 09.05.2012, 05.06.2012, 25.06.2012, 03.07.2012, 23.07.2012, 06.08.2012, 31.08.2012, 06.09.2012, 04.10.2012 08.10.2012 ಮತ್ತು 02.11.2012.
4. ಕವಿನಿನಿ ಪತ್ರ ಸಂಖ್ಯೆ: AI Q5 D/5/1 ದಿನಾಂಕ: 05.11.2012.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ

ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.

4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.

5. ಸರ್ಕಾರವು 2012–13ನೇ ಸಾಲಿನ ನವೆಂಬರ್–2012ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 15.11.2012**

1. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರವು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2012–13ನೇ ಸಾಲಿನ ನವೆಂಬರ್ 2012ರ ತಿಂಗಳಿಗೆ ಸಹಾಯಧನ ರೂ.200 ಕೋಟಿಗಳ (ಇನ್ನೂರು ಕೋಟಿ ರೂ.ಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 ವಿದ್ಯುತ್ ಪೂರೈಕೆಗೆ ಸಹಾಯಧನ (ಯೋಜನೇತರ)"ಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳ ಪರವಾಗಿ ಬೆವಿಕಂಗೆ ನೇರ ಬಿಡುಗಡೆ |
|---|---|---|---|
| **1** | **2** | **3** | **4** |
| ಬೆವಿಕಂ | 35 | 35 | 0 |
| ಮವಿಕಂ | 13 | 3 | 10 |
| ಹುವಿಕಂ | 74 | 39 | 35 |
| ಗುವಿಕಂ | 46 | 45 | 1 |
| ಚಾವಿಸನಿನಿ | 32 | 17 | 15 |
| **ಒಟ್ಟು** | **200** | **139** | **61** |

2. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗಳ ಕೋರಿಕೆಯನ್ನು ಪರಿಗಣಿಸಿ ಮೇಲಿನ ಕೋಷ್ಟಕದಲ್ಲಿರುವಂತೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

3. ಮೇಲಿನ ಕೋಷ್ಟಕದಲ್ಲಿರುವಂತೆ ಮಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿರುವ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL)ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ಮತ್ತು ಖಾತರಿ ಪತ್ರ (Letter of Credit) ವೆಚ್ಚ ಭರಿಸಲು ರೂ. 61 ಕೋಟಿಗಳನ್ನು (ಅರವತ್ತೊಂದು ಕೋಟಿ ರೂ.ಗಳು) ಬಿಡುಗಡೆ ಮಾಡಿದೆ.

4. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

6. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

7. 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 1309 Exp-I/2012 ದಿನಾಂಕ: 09.11.2012ರ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

**PR.2196**

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31.05.2002
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19.12.2002
3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 539 ವೆಚ್ಚ–1/2012 ದಿನಾಂಕ 25.04.2012.
4. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 771 ವೆಚ್ಚ–1/2012 ದಿನಾಂಕ 29.06.2012.
5. ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಪ್‌ಪಿ 2012 ದಿನಾಂಕ:27.04.12.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ದತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2012–13ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ.550.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.
4. ಕ್ರಮಾಂಕ 5ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯಿದೆಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.
5. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2012–13ನೇ ಸಾಲಿನ ಜುಲೈ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ.33.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 16 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 06–07–2012**

1. ಪ್ರಸ್ಥಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2012–13ನೇ ಸಾಲಿನ ಜುಲೈ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ.33.00 ಕೋಟಿ (ಮೂವತ್ತಮೂರು ಕೋಟಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2 ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3 ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.

4 ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 771 ವೆಚ್ಚ–1/2012 ದಿನಾಂಕ 29–06–2012ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**PR.2078**

## ಇಂಧನ ಸಚಿವಾಲಯ

**ವಿಷಯ:** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು

**ಓದಲಾಗಿದೆ:** 1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31.05.2002.

2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19.12.2002.

3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 539 ವೆಚ್ಚ–1/2012 ದಿನಾಂಕ 25.04.2012.

4. ಆರ್ಥಿಕ ಇಲಾಖೆ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 4 ಟಿಎಫ್‌ಪಿ 2012 ದಿನಾಂಕ:27.04.12.

5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 771 ವೆಚ್ಚ–1/2012 ದಿನಾಂಕ 29.06.2012.

6. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಟಿಎಫ್‌ಪಿ 2012 ದಿನಾಂಕ: 04.10.2012.

7. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1199 Exp-1/12 ದಿನಾಂಕ 12.10.2012.

**ಪ್ರಸ್ತಾವನೆ:**

1 ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2 ಮೇಲೆ(2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, “ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು” ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3 2012–13ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ “2801–80–101–1–13–106 (ಯೋಜನೇತರ)” ಲೆಕ್ಕಶೀರ್ಷಿಕೆಯಡಿ ರೂ.550.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.

4 ಕ್ರಮಾಂಕ 4ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯಿದೆಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.

5 ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2012–13ನೇ ಸಾಲಿನ ನವೆಂಬರ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106” ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ.50.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಇಎನ್ 16 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ 16.11.2012**

1 ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2012–13ನೇ ಸಾಲಿನ ನವೆಂಬರ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106” ಸಹಾಯಧನ (ಯೋಜನೇತರ)ದ ಅಡಿಯಲ್ಲಿ ರೂ.50.00 ಕೋಟಿ (ಐವತ್ತು ಕೋಟಿ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

2 ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತಿ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

3 ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು “ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ” ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate)ನ್ನು ಸಲ್ಲಿಸತಕ್ಕದ್ದು.

4 ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 4 TFP 2012 ದಿನಾಂಕ:27–04–2012 ಹಾಗೂ ಎಫ್‌ಡಿ 8 ಟಿಎಫ್‌ಪಿ 2012 ದಿನಾಂಕ: 04.10.2012ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

**PR.2195**

## ಇಂಧನ ಸಚಿವಾಲಯ

**ವಿಷಯ:** 2012–13ನೇ ಸಾಲಿನಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಸರ್ಕಾರದ ಬಂಡವಾಳ ಹೂಡಿಕೆಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 471 ವೆಚ್ಚ–1/2012 ದಿನಾಂಕ 02.04.2012.
2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 471 ವೆಚ್ಚ–1/2012 ದಿನಾಂಕ 03.04.2012.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್‌ಆರ್ 2012 ದಿನಾಂಕ: 13.04.2012
4. ಕವಿನಿನಿ ಪತ್ರ ಸಂಖ್ಯೆ: Al Q5 D/25 ದಿನಾಂಕ: 25.06.2012

ಪ್ರಸ್ತಾವನೆ:

1) 2012–13ನೇ ವರ್ಷದ ಆಯವ್ಯಯ ಸವಿವರ ವೆಚ್ಚದ ಅಂದಾಜಿನಲ್ಲಿ ವಿದ್ಯುಚ್ಛಕ್ತಿ ಯೋಜನೆಗಳ ಮೇಲಣ ಬಂಡವಾಳ ಹೂಡಿಕೆಗೆ ಲೆಕ್ಕ ಶೀರ್ಷಿಕೆ 4801–01–190–0–09–211 **Investment in Power Utility** ಯಡಿ ರೂ.500 ಕೋಟಿಗಳನ್ನು ನಿಗಧಿಪಡಿಸಲಾಗಿದೆ.

2) ಕ್ರಮಾಂಕ 3ರಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ರೂ.50 ಕೋಟಿಗಳ (ರೂ. ಐವತ್ತು ಕೋಟಿಗಳು ಮಾತ್ರ) ವಿದ್ಯುಚ್ಛಕ್ತಿ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (Equity) ಹಣ ಬಿಡುಗಡೆ ಮಾಡಿದೆ.

3) ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ರೂ. 75.00 ಕೋಟಿಗಳ (ರೂ. ಎಪ್ಪತ್ತೈದು ಕೋಟಿಗಳು ಮಾತ್ರ) ವಿದ್ಯುಚ್ಛಕ್ತಿ ಬಂಡವಾಳ ಹೂಡಿಕೆಗಾಗಿ ಈಕ್ವಿಟಿ (Equity) ಹಣ ಬಿಡುಗಡೆ ಮಾಡಲು ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 17 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ 28–06–2012**

1. ಮೇಲೆ ವಿವರಿಸಲಾದ ಸನ್ನಿವೇಶಗಳಲ್ಲಿ, ಸರ್ಕಾರವು ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ 2012–13ನೇ ಸಾಲಿನಲ್ಲಿ ರೂ.75.00 ಕೋಟಿಗಳನ್ನು (ರೂ. ಎಪ್ಪತ್ತೈದು ಕೋಟಿಗಳು ಮಾತ್ರ) ವಿದ್ಯುತ್ ಬಂಡವಾಳ ಹೂಡಿಕೆಗಾಗಿ ಲೆಕ್ಕ ಶಿರ್ಷಿಕೆ "4801–01–190–0–09–211 Investment in ಕಠಿತಿಜಡಿ Utilities (ಯೋಜನೆ)" ಯಡಿ ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ನಿಗಮ ನಿಯಮಿತವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ ರವರ ಮೇಲು ರುಜುವನ್ನು ಹಣ ಸ್ವೀಕೃತಿ ರಸೀದಿ (payee's receipts)ಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಮೊಬಲಗನ್ನು ಬಂಡವಾಳ (Equity)ಯಾಗಿ ಬಳಸಿಕೊಂಡು, ಈ ಬಗ್ಗೆ ದೃಡೀಕರಣ (Utilization Certificate) ಹಾಗೂ ಅನುಸರಣಾ ವರದಿಯನ್ನು ಸರ್ಕಾರಕ್ಕೆ ಒದಗಿಸತಕ್ಕದ್ದು.
4. ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ1–A ರಲ್ಲಿ ಪದತ್ತವಾದ ಅಧಿಕಾರದಂತೆ ಆರ್ಥಿಕ ಇಲಾಖೆಯು ಕರ್ನಾಟಕ ಆರ್ಥಿಕ ಸಂಹಿತೆ 1957ರ ಕಲಂ 17(ಸಿ) (4) ರ ಪ್ರಕಾರ ಸರ್ಕಾರದ ಬಂಡವಾಳ ಹೂಡಿಕೆಯ ಸಂಬಂಧ ರಾಜ್ಯ ಹುಜೂರು ಟ್ರಜರಿಯಿಂದ ಹಣ ಬಿಡುಗಡೆಯ ಕುರಿತು ಮಹಾಲೇಖಪಾಲಕರಿಂದ ಅಧಿಕಾರ ಪತ್ರ ಹೊರಡಿಸುವ ಷರತ್ತಿನಿಂದ/ವಿನಾಯಿತಿ ನೀಡಿದೆ.
5. ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
6. ಮಹಾಲೇಖಪಾಲಕರವರಿಂದ ಪಡೆದುಕೊಳ್ಳಬೇಕಾಗಿರುವ ಸಹಮತಿಗೆ ವಿನಾಯಿತಿಯನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: FD47Exp-I/2012 ದಿನಾಂಕ: 03.04.2012 ರಲ್ಲಿ ನೀಡಿದೆ.
7. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: FD 04 TFP 2012 ದಿನಾಂಕ: 27.04.2012 ರ ಪ್ರಕಾರ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ
**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**PR.2299**

## ಇಂಧನ ಸಚಿವಾಲಯ

**ವಿಷಯ:** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2012–13ರ ಹಣಕಾಸು ವರ್ಷದಲ್ಲಿ ಎರಡನೇ ತ್ರೈಮಾಸಿಕ ಅವಧಿಗೆ ಕಂತು ಸಹಾಯಾನುದಾನದ ಹಣ ಬಿಡುಗಡೆ ಕುರಿತು.

**ಓದಲಾಗಿದೆ:** 1. ಕವಿನಿ ಆಯೋಗದ ಪತ್ರ ಸಂಖ್ಯೆ ನಂ ಎಫ್/01/3/1260 ದಿನಾಂಕ 18.07.2012.
2. ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್‌ಆರ್ 2012 ದಿನಾಂಕ 02–06–2012.

ಪ್ರಸ್ತಾವನೆ:

1. 2012–13 ನೇ ಸಾಲಿನ ಆಯವ್ಯಯದಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುದಾನ ಸಲುವಾಗಿ ರೂ.425.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿಧೆ. ಅದರಂತೆ ದಿನಾಂಕ 02–06–2012ರ ಮೇಲಿನ ಆದೇಶದಲ್ಲಿ ಮೊದಲ ಕಂತಿನ ಅನುದಾನವಾದ ರೂ.106.25 ಲಕ್ಷಗಳನ್ನು ಕವಿನಿ ಆಯೋಗಕ್ಕೆ ಬಿಡುಗಡೆ ಮಾಡಲಾಗಿದೆ.
2. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2012–13 ನೇ ಸಾಲಿಗೆ ಎರಡನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ.106.25 ಲಕ್ಷಗಳನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್ಆರ್ 2012, ಬೆಂಗಳೂರು, ದಿನಾಂಕ 09–08–2012**

ಸರ್ಕಾರವು 2012–13ನೇ ಹಣಕಾಸು ವರ್ಷದ ಎರಡನೇ ತ್ರೈಮಾಸಿಕ ಅವಧಿಗೆ ಲೆಕ್ಕ ಶೀರ್ಷಿಕೆ "2801–80–101–1–07–101 ಸಹಾಯಾನುದಾನ (ಯೋಜನೇತರ)" ಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ.106.25/– ಲಕ್ಷ (ಒಂದು ನೂರ ಆರು ಲಕ್ಷ ಮತ್ತು ಇಪ್ಪತ್ತೈದು ಸಾವಿರ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿ ಆದೇಶಿಸಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payee Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27–04–2012ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

**PR.2075**

**ಇಂಧನ ಸಚಿವಾಲಯ**

**ವಿಷಯ:** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಇಎನ್ 145 ಪಿಎಸ್ಆರ್ 2004 ದಿನಾಂಕ 15–03–2005
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್ಆರ್ 2008 ದಿನಾಂಕ 04–09–2008
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27–04–2012
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್ಆರ್ 2012 ದಿನಾಂಕ 23.04.2012, 09–05–2012, 05.06.2012 ಮತ್ತು 25.06.2012.
5. ಬೆವಿಕಂ ವ್ಯ.ನಿ.ಪತ್ರ ಸಂಖ್ಯೆ ಪ್ರ.ವ್ಯ.(ಪಿಪಿ)/ಬಿಸಿ–39/2012–13 ದಿನಾಂಕ 02.07.2012.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.
3. ಹುಗ್ರಾವಿಸಸ/ವಿಸಕಂಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.
4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.
5. ಕ್ರಮಾಂಕ 3ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3 ಕಂಡಿಕೆ–10ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಸಹಾಯಧನ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯಿದೆಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.
6. ಸರ್ಕಾರವು 2012–13ನೇ ಸಾಲಿನ ಜುಲೈ–2012ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್ಆರ್ 2012 ಬೆಂಗಳೂರು, ದಿನಾಂಕ 03–07–2012**

1 ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಜುಲೈ–2012ರ ತಿಂಗಳಿಗೆ ರೂ. 381.00 ಕೋಟಿಗಳ (ರೂ. ಮುನ್ನೂರ ಎಂಬತ್ತೊಂದು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 (ಸಹಾಯಧನ) (ಯೋಜನೇತರ) (ಆರ್.ಇ.ಸಬ್ಸಿಡಿ)"ಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರಜ್ಯೋತಿ ಸ್ಥಾವರಗಳಿಗೆ | 2012–13ರ ಜುಲೈ ಮಾಹೆಗೆ ಬಿಡುಗಡೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳ ಪರವಾಗಿ ಬೆವಿಕಂಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ |
|---|---|---|---|---|---|---|
| ಬೆವಿಕಂ | 47.00 | 3.00 | **50.00** | 50.00 | 0.00 | 0.00 |
| ಮವಿಕಂ | 34.00 | 1.00 | **35.00** | 26.00 | 9.00 | 0.00 |
| ಹುವಿಕಂ | 150.00 | 6.00 | **156.00** | 71.00 | 25.00 | 60.00 |
| ಗುವಿಕಂ | 77.00 | 3.00 | **80.00** | 38.00 | 2.00 | 40.00 |
| ಚಾವಿಸನಿನಿ | 58.00 | 2.00 | **60.00** | 20.00 | 10.00 | 30.00 |
| **ಒಟ್ಟು** | **366.00** | **15.00** | **381.00** | **205.00** | **46.00** | **130.00** |

2 ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗಳ ಕೋರಿಕೆಯನ್ನು ಪರಿಗಣಿಸಿ ಮೇಲಿನ ಕೋಷ್ಟಕದಲ್ಲಿರುವಂತೆ ಸಹಾಯಧನದ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

3 ಮೇಲಿನ ಕೋಷ್ಟಕದಲ್ಲಿರುವಂತೆ ಮವಿಕಂ, ಹುವಿಕಂ, ಗುವಿಕಂ ಮತ್ತು ಚಾವಿಸನಿಗಳ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿರುವ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL)ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚ ಭರಿಸಲು ಬಿಡುಗಡೆ ಮಾಡಿದೆ.

4 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

5 ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

6 ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿಸಕಂಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

7 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8 ಈ ಆದೇಶವನ್ನು ಮೇಲೆ ಓದಲಾದ ಕ್ರಮಾಂಕ–3ರ ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದ ಪ್ರಕಾರ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

**PR. 2300**

**ಇಂಧನ ಸಚಿವಾಲಯ**

**ವಿಷಯ:** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಇಎನ್ 145 ಪಿಎಸ್‌ಆರ್ 2004 ದಿನಾಂಕ 15–03–2005

2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04–09–2008

3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 04 ಟಿಎಫ್‌ಪಿ 2012 ದಿನಾಂಕ 27–04–2012

4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012 ದಿನಾಂಕ 23.04.2012, 09–05–2012, 05.06.2012, 25.06.2012, 03.07.2012 ಮತ್ತು 23.07.2012.

ಪ್ರಸ್ತಾವನೆ:

1 ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2 ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ 01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಸರಬರಾಜು ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.

3. ಹುಗ್ರಾವಿಸಸ/ವಿಸಕಂಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.4550.00 ಕೋಟಿಗಳನ್ನು ಒದಗಿಸಲಾಗಿದೆ.

4 ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ.4722.04 ಕೋಟಿಗಳಷ್ಟು ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.

6 ಕ್ರಮಾಂಕ 3ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶದ ಭಾಗ–3 ಕಂಡಿಕೆ–10ರಲ್ಲಿ ಆಯವ್ಯಯದಲ್ಲಿ ನಿಗಧಿಪಡಿಸಿರುವ ಸಹಾಯಧನ ಮೊತ್ತವನ್ನು ಆರ್ಥಿಕ ಇಲಾಖೆಯ ಸಹಮತಿಯೆಂದು ಪರಿಗಣಿಸಿ, ಆಯವ್ಯಯದ 1/12ರಷ್ಟನ್ನು ಆಡಳಿತ ಇಲಾಖೆಯು ಮೊದಲ 6 ತಿಂಗಳವರೆಗೆ ಪ್ರತಿ ತಿಂಗಳು ಬಿಡುಗಡೆ ಮಾಡಲು ಆದೇಶಿಸಿದೆ.

7 ಸರ್ಕಾರವು 2012–13ನೇ ಸಾಲಿನ ಆಗಸ್ಟ್–2012ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 14 ಪಿಎಸ್‌ಆರ್ 2012 ಬೆಂಗಳೂರು, ದಿನಾಂಕ 06–08–2012**

1. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಆಗಸ್ಟ್–2012ರ ತಿಂಗಳಿಗೆ ರೂ. 375.00 ಕೋಟಿಗಳ (ರೂ. ಮುನ್ನೂರ ಎಪ್ಪತ್ತೈದು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801–80–101–1–04–106 (ಸಹಾಯಧನ) (ಯೋಜನೇತರ) (ಆರ್.ಇ.ಸಬ್ಸಿಡಿ)" ಯಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯಜ್ಯೋತಿ/ ಕುಟೀರಜ್ಯೋತಿ ಸ್ಥಾವರಗಳಿಗೆ | 2012–13ರ ಆಗಸ್ಟ್ ಮಾಹೆಗೆ ಬಿಡುಗಡೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳ ಪರವಾಗಿ ಬೆವಿಕಂಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ |
|---|---|---|---|---|---|---|
| ಬೆವಿಕಂ | 42.00 | 3.00 | **45.00** | 45.00 | 0.00 | 0.00 |
| ಮವಿಕಂ | 19.00 | 1.00 | **20.00** | 12.00 | 8.00 | 0.00 |
| ಹುವಿಕಂ | 155.00 | 5.00 | **160.00** | 70.00 | 25.00 | 65.00 |
| ಗುವಿಕಂ | 86.00 | 4.00 | **90.00** | 53.00 | 2.00 | 35.00 |
| ಚಾವಿಸನಿನಿ | 58.00 | 2.00 | **60.00** | 20.00 | 10.00 | 30.00 |
| **ಒಟ್ಟು** | **360.00** | **15.00** | **375.00** | **200.00** | **45.00** | **130.00** |

*ಹುವಿಕಂಗೆ ನೇರ ಬಿಡುಗಡೆ ಮೊತ್ತವಾದ ರೂ 65.00 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ.5.00 ಕೋಟಿಗಳೆಂದು ಲೆಕ್ಕೀಕರಿಸುವುದು.

2 ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ಮತ್ತು ಹುವಿಕಂ, ಗುವಿಕಂ ಮತ್ತು ಚಾವಿಸನಿಗಳ ಕೋರಿಕೆಯನ್ನು ಪರಿಗಣಿಸಿ. ಸಹಾಯಧನವನ್ನು ಮೇಲಿನ ಕೋಷ್ಟಕದಲ್ಲಿರುವಂತೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿದೆ.

3 ಮೇಲಿನ ಕೋಷ್ಟಕದಲ್ಲಿರುವಂತೆ ಮವಿಕಂ, ಹುವಿಕಂ, ಗುವಿಕಂ ಮತ್ತು ಚಾವಿಸನಿಗಳ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಹಂಚಿಕೆ ಮಾಡಿ ಬಿಡುಗಡೆ ಮಾಡಿರುವ ರೂ 45 ಕೋಟಿಗಳ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL)ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚ ಭರಿಸಲು ಬಿಡುಗಡೆ ಮಾಡಿದೆ. ಮವಿಕಂ, ಹುವಿಕಂ,ಗುವಿಕಂ ಗುವಿಕಂ ಮತ್ತು ಚಾವಿಸನಿಗಳು, ಬೆವಿಕಂಗೆ ಬಿಡುಗಡೆ ಮಾಡಿರುವ ರೂ 45 ಕೋಟಿಗಳನ್ನು GUVNL'ನಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚಕ್ಕೆ ಮಾತ್ರ ಲೆಕ್ಕೀಕರಿಸುವುದು.

4 ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Cerificate) ಸಲ್ಲಿಸತಕ್ಕದ್ದು

5 ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

6 ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿಸಕಂಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

7 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಮತ್ತು ಭಾಗ್ಯಜ್ಯೋತಿ/ ಕುಟೀರಜ್ಯೋತಿ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗು ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

8 ಈ ಆದೇಶವನ್ನು ಮೇಲೆ ಓದಲಾದ ಕ್ರಮಾಂಕ–3ರ ಆರ್ಥಿಕ ಇಲಾಖೆಯ ಸರ್ಕಾರಿ ಆದೇಶದ ಪ್ರಕಾರ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರಮತ್ತು ಅವರ ಹೆಸರಿನಲ್ಲಿ

**ಕೌಸಲ್ಯಾ**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**PR.2074**

## LABOUR SECRETARIAT

**Sub:** Reconstitution of District Committees and formation of Taluk Committee for implementation of Child Labour Action Plan.

**Read**: 1. G.O No. LD 54 CLC 2000 (1), Bangalore, dated 29th May 2001

2. G.O No. LD 71 LCL 2006, Bangalore, dated 29.03.2007

3. G.O No. LD 54 CLC 2000 (IV), Bangalore, Dated: 29-05-2001

4. G.O No. LD 54 CLC 2000 (V), Bangalore, Dated: 29-05-2001

5. Labour Commissioners' Letter No. KCP/SAP/CR-15/2011-12 dated:22.08.2012

**Preamble**:

With a vision to make Karnataka a 'Child Labour Free State', Government of Karnataka with the approval of the State Cabinet, implemented the 'State Child Labour Action Plan' for a time bound period of 06 years from the financial year 2001-02 to 2006-07, by issuing a Government Order LD 54 CLC 2000 (1), Bangalore, dated 29th May 2001. Later, the Government accorded permission vide Government Order LD 71 CLC 2006, Bangalore, dated 29.03.2007 extending the period of action plan from 2007-08 to 2011-12.

The Government implemented the action plan with an objective of complete elimination of child labour. Hitherto, significant numbers of children have been rehabilitated through child labour special residential schools under the state action plan as well as through day bridge schools under the National Child Labour Project (NCLP). Sincere efforts have been made to eliminate child labour, in collaboration with different Government departments and civil society organisations. As child labour is a complex subject, it would be impossible for the Department of Labour alone to take up the task of its elimination without the active participation of various other government departments.

Several new initiatives have been included to the activities and efforts to combat child labour problem. Accordingly, an online complaint receiving mechanism has been introduced at the Headquarters of Department of Labour, along with other means like registering complaints through phone, e-mail and by post. The services of Department of Women and Child Development's Childline 1098 is also being utilised for this purpose. A web based child labour tracking system has been developed and introduced in all districts in order to keep track of the information relating to rescued and rehabilitated child labourers across the state. A bi-monthly e-journal by name 'Baalavani' is being published with an objective of sharing the activities of elimination of child labour in the state, with the society. Apart from this awareness is being created among the people on ill-effects of employing child labour through various means including electronic media and print media advertisements, posters, stickers, etc. The 'World Day Against Child Labour' is being observed every year on June 12.

Apart from this, several special child labour projects have been implemented since 2001 by the State in coordination with voluntary organisations and with the active support of International Labour Organisation (ILO) and UNICEF, etc.

The State Government constituted the Karnataka State Child Labour Eradication Project Society, under the Department of Labour to monitor the activities and to act as a nodal agency in the State with respect to implementation of child labour projects and programmes. Likewise State and District committees were also constituted. These committees are permitted to seek donations, contributions, scholarships, aid or any other financial assistance from public, companies, corporations, institutions, etc., in addition to government grants, subject to any restrictions, the government may impose in this regard from time to time.

In view of the above mentioned points, it is felt that there is a need to reconstitute the District committees and introduce taluk-level committees, as even the designations of several members/departments of the committees have changed.

Hence this order.

**Government Order No. LD 86 CLC 2012, Bangalore Dated: 20.10.2012**

For the reasons stated in the preamble, for effective implementation of child labour eradication programmes the District Level Committees have been reconstituted and Taluk Level Committee is constituted.

**District Level Committee**

**1.1 District Level Advisory Committee**

The District Level Advisory committee was constituted to guide the Executive Committee to implement the state child labour action plan, vide Government Order No. LD 54 CLC 2000 (IV), Bangalore, Dated: 29-05-2001, under the Chairmanship of respective Deputy Commissioners. Members of the revised District-Level Advisory Committee are as follows:

| | | |
|---|---|---|
| 1. | Deputy Commissioner | Chairman |
| 2. | Member of Parliament representing the concerned Parliamentary Constituency of the district | Member |
| 3. | Member of Parliament (Rajya Sabha Member of the District) | Member |
| 4. | All members of Legislative Assembly representing Assembly constituencies of the district | Member |
| 5. | All members of Legislative Council of the concerned districts | Member |
| 6. | President, Zilla Panchayat of the District | Member |
| 7. | Superintendent of Police | Member |
| 8. | Chief Executive Officer, Zilla Panchayat | Member |
| 9. | Commissioner/Chief Officer of the concerned urban, local body at the District Headquarters/ District Municipality | Member |
| 10. | Joint Director, Department of Industries and Commerce | Member |
| 11. | Joint Director, Department of Agriculture | Member |
| 12. | Deputy Director – Women and Child Development | Member |
| 13. | Deputy Director of Public Instruction | Member |
| 14. | Executive Engineer, KPTCL | Member |
| 15. | District Officer for Backward Classes and Minorities | Member |
| 16. | District Health and Family Welfare Officer | Member |
| 17. | Executive Engineer, PWD | Member |
| 18. | District Publicity and Information Officer | Member |
| 19. | District Social Welfare Officer | Member |
| 20. | Asst. Commissioner of Revenue Sub-Divisions of the district | Member |
| 21. | Assistant Director / Deputy Director of Factories | Member |
| 22. | Assistant Labour Commissioner/Labour Officer | Member |
| 23. | Head of the Department, Department of Social Work of the concerned University | Member |
| 24. | Manager – Lead Bank | Member |
| 25. | Two representatives of reputed NGOs (to be nominated by the Chairman) | Member |
| 26. | One representative each from trade union and employers' association (to be nominated by the Chairman) | Member |

| | | |
|---|---|---|
| 27. | Four reputed social workers (One each representing SC/ST, minorities and women categories who are working for eradication of child labour other can be from general category (to be nominated by the Chairman). | Members |
| 28. | Project Director, NCLP/SCLP | Member |
| 29. | Additional Deputy Commissioner | Member Secretary |

1. The period of the nominated members shall not exceed more than 2 years.
2. The Committee shall meet as and when required but shall meet atleast once in 3 months to advise & guide on all matters for implementation of Action Plan.
3. The non-official members of the Committee shall function on volunteer basis and no sitting fee or TA, DA shall be paid.

**1.2. District Level Executive Committee**

The District level Executive Committee was constituted to implement the action plan, vide Government Order No. LD 54 CLC 2000 (V), Bangalore, dated 29-05-2001 under the Chairmanship of the respective Deputy Commissioner of the district. The District Level Executive Committee has been reconstituted as follows:

| | | |
|---|---|---|
| 1. | Deputy commissioner | Chairman |
| 2. | Chief Executive Officer, Zilla Panchayat | Vice – Chairman |
| 3. | Superintendent of Police | Member |
| 4. | Commissioner/Chief Officer of the concerned urban, local body at the District Headquarter / Municipality | Member |
| 5. | Executive Engineer, PWD | Member |
| 6. | Executive Engineer, KPTCL | Member |
| 7. | Assistant Commissioners, Sub-divisions of the District | Member |
| 8. | Joint Director, District Industries and Commerce | Member |
| 9. | District Health and Family Welfare Officer | Member |
| 10. | Deputy Director of Women & Child Development | Member |
| 11. | Deputy Director of Public Instruction | Member |
| 12. | Assistant/Deputy Director of Factories | Member |
| 13. | District Publicity & Information Officer | Member |
| 14. | District Social Welfare Officer | Member |
| 15. | District Officer for Backward Classes and Minorities | Member |
| 16. | Project Director, NCLP/SCLP | Convener |
| 17. | Assistant Labour Commissioner/Labour Officer | Member Secretary |

1. Assistant Labour Commissioner shall be the member secretary in the districts where both Assistant Labour Commissioner and Labour Officer are functioning at the district headquarters.
2. The period of the nominated members shall not exceed more than 2 years.
3. The Committee shall meet as and when required but shall meet atleast once in two month. The executive committee shall discharge all the functions envisaged in the Action Plan.
4. The non-official members of the Committee shall function on volunteer basis and no sitting fee or TA, DA shall be paid.

**2. Taluk Level Committee:**

Taluk-level Child Labour Elimination and Rehabilitation Committee (T-CLERC) is constituted as follows:

| Sl. No. | Designation | Designation in the Committee |
|---|---|---|
| 1. | Tahasildar | Chairman |

| Sl. No. | Designation | Designation in the Committee |
|---|---|---|
| 2. | CDPO, Women & Child Development Department | Member |
| 3. | Block Education Officer, Department of Public Instruction | |
| 4. | Officer, Sarva Shikshana Abhiyana | |
| 5. | Chief Officer, Taluk Municipality | |
| 6. | Taluk Social Welfare Officer | |
| 7. | Extension Officer, Department of Backward Classes and Minorities | |
| 8. | Sericulture Extension Officer/Assistant Director, Sericulture Department | |
| 9. | Police Inspector / Sub-Inspector | |
| 10. | Project Director | Convener |
| 11. | Senior/Labour Inspector | Member Secretary |

**1.** The period of the nominated members shall not exceed more than 2 years.

**2.** The Committee shall meet as and when required but shall meet atleast once in a month. This committee shall discharge all the functions envisaged in the Action Plan and as guided by the district executive committee.

**3.** The non-official members of the Committee shall function on volunteer basis and no sitting fee or TA, DA shall be paid.

This order comes into force with immediate effect.

By Order and in the name of the Governor of Karnataka

**R.Savithri**

Deputy Special Officer (CLC)

Labour Department

**PR. 2187**

## ಕಾರ್ಮಿಕ ಸಚಿವಾಲಯ

**ವಿಷಯ:** ಕಾ.ರಾ.ವಿ.ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ಡಾ: ಬಿಂದು ಶಿವರಾಂ ಮತ್ತು ಡಾ. ಕಾಂತಿ ಜಿ ಸಹಾಯಕ ದಂತ ಚಿಕಿತ್ಸಕರು ಇವರಿಗೆ ಕಾಲಬದ್ದ ಪದೋನ್ನತಿ ಜಾರಿಗೆ ಬರುವ ದಿನಾಂಕ ಮತ್ತು ಪದನಾಮವನ್ನು ಪರಿಷ್ಕರಿಸಿ ಪರಿಷ್ಕೃತ ಆದೇಶ ಹೊರಡಿಸುವ ಕುರಿತು

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಾಇ 266 ಎಲ್ಎಸ್ಐ 2008, ದಿನಾಂಕ:21–03–2012 ಮತ್ತು 04–08–2012.

2. ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ರಾಜಾಜಿನಗರ, ಬೆಂಗಳೂರು ಇವರ ಪತ್ರ ಸಂಖ್ಯೆ: ವೈದ್ಯರು/840/12–13, ದಿನಾಂಕ: 30–10–2012.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಡಾ. ಆರ್.ಕೆ. ತೇಜೋವತಿ, ಡಾ. ಬಿಂದು ಶಿವರಾಂ ಮತ್ತು ಡಾ. ಕಾಂತಿ ಜಿ ಸಹಾಯಕ ದಂತ ಶಸ್ತ್ರ ಚಿಕಿತ್ಸಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯ ಇವರಿಗೆ 6 ಮತ್ತು 13 ವರ್ಷಗಳ ಕಾಲಬದ್ದ ಪದೋನ್ನತಿ ಸೌಲಭ್ಯವನ್ನು ದಿನಾಂಕ: 07–12–2007 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಪರಿಷ್ಕರಿಸಲಾಗಿದೆ.

ನಿರ್ದೇಶಕರು, ಕಾರ್ಮಿಕರ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ಡಾ. ಬಿಂದುಶಿವರಾಂ ಮತ್ತು ಡಾ. ಕಾಂತಿ ಜಿ ಸಹಾಯಕ ದಂತ ಚಿಕಿತ್ಸಕರು, ಕಾ.ರಾ.ವಿ. ಆಸ್ಪತ್ರೆ, ಇಂದಿರಾನಗರ, ಬೆಂಗಳೂರು ಇವರಿಬ್ಬರು ಮಾತ್ರ ದಿನಾಂಕ: 28–09–2012ರಂದು ಮನವಿ ಸಲ್ಲಿಸಿ, ನೈಜ ದಿನಾಂಕದಿಂದ ಅನ್ವಯವಾಗುವಂತೆ ಕಾಲಬದ್ದ ಪದೋನ್ನತಿ ಸೌಲಭ್ಯವನ್ನು ವಿಸ್ತರಿಸಿ ಪದನಾಮವನ್ನು ಪುನರ್ ನಾಮಕರಣ ಮಾಡಬೇಕೆಂದು ಕೋರಿರುವ ಬಗ್ಗೆ ವರದಿ ಸಲ್ಲಿಸಿದ್ದಾರೆ.

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಾಇ 8 ಎಲ್ಎಸ್ಐ 2008, ದಿನಾಂಕ: 05–12–2008ರ ಪ್ರಕಾರ ಇಲಾಖೆಯಲ್ಲಿ 06 ಮತ್ತು 13 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ ವೈದ್ಯಾಧಿಕಾರಿಗಳಿಗೆ ದಿನಾಂಕ: 07–12–2007ರಿಂದ ಜಾರಿಗೆ ಬರುವಂತೆ ಕಾಲಬದ್ದ ಪದೋನ್ನತಿ ಸೌಲಭ್ಯವನ್ನು ವಿಸ್ತರಿಸಿ ಜಾರಿಗೊಳಿಸಿದಂತೆ ಡಾ. ಬಿಂದು ಶಿವರಾಂ ಮತ್ತು ಡಾ. ಕಾಂತಿ ಜಿ ಸಹಾಯಕ ದಂತ ಚಿಕಿತ್ಸಕರು ಇವರಿಗೆ ಮಾತ್ರ 06 ಮತ್ತು 13 ವರ್ಷಗಳ ಕಾಲಬದ್ದ ಪದೋನ್ನತಿ ಜಾರಿಗೆ ಬರುವ ದಿನಾಂಕ ಮತ್ತು ಪದನಾಮವನ್ನು ಪರಿಷ್ಕರಿಸಿ ತಿದ್ದೋಲೆ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕೂಷವಾಗಿ ಪರಿಶೀಲಿಸಿ ದಿನಾಂಕ: 04–08–2012ರ ಆದೇಶವನ್ನು ಈ ಕೆಳಕಂಡಂತೆ ಪರಿಷ್ಕರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 266 ಎಲ್ಎಸ್ಐ 2008, ದಿನಾಂಕ: 15–12–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಾಇ 266 ಎಲ್ ಎಸ್ ಐ 2008 ದಿನಾಂಕ: 04–08–2012ರ ಆದೇಶದಲ್ಲಿ ಡಾ. ಆರ್.ಕೆ. ತೇಜೋವತಿ, ಡಾ. ಬಿಂದುಶಿವರಾಂ ಮತ್ತು ಡಾ. ಕಾಂತಿ ಜಿ ಇವರಿಗೆ 6 ಮತ್ತು 13 ವರ್ಷಗಳ ಕಾಲಬದ್ದ ಪದೋನ್ನತಿ ಸೌಲಭ್ಯವನ್ನು ದಿನಾಂಕ: 07–12–2007ರಿಂದ ಜಾರಿಗೊಳಿಸಲಾಗಿರುವುದನ್ನು ಡಾ. ತೇಜೋವತಿಯವರಿಗೆ ಸ್ಥಿರೀಕರಿಸಿ, ಡಾ. ಬಿಂದು ಶಿವರಾಂ

ಮತ್ತು ಡಾ. ಕಾಂತಿ ಜಿ ಇವರಿಬ್ಬರಿಗೆ ಮಾತ್ರ ಅನ್ವಯವಾಗುವಂತೆ ಇವರುಗಳ ಹೆಸರಿನ ಮುಂದೆ ನಮೂದಿಸಿರುವ ಈ ಕೆಳಕಂಡ ವಿವರಗಳಂತೆ ಪರಿಷ್ಕೃತ ಆದೇಶವನ್ನು ಜಾರಿಗೊಳಿಸಲಾಗಿದೆ.

| ಕ್ರ ಸಂ | ವೈದ್ಯರ ಹೆಸರು, ಪದನಾಮ, ಸ್ಥಳ, ವಿದ್ಯಾರ್ಹತೆ, ವೇತನ ಶ್ರೇಣಿ, ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | 06ನೇ ವರ್ಷದ ಕಾಲಬದ್ದ ಪದೋನ್ನತಿ ಜಾರಿಗೆ ಬರುವ ದಿನಾಂಕ ಬದಲಾಗುವ ಪದನಾಮ, ವೇತನ ಶ್ರೇಣಿ | 13ನೇ ವರ್ಷದ ಕಾಲಬದ್ದ ಪದೋನ್ನತಿ ಜಾರಿಗೆ ಬರುವ ದಿನಾಂಕ, ಬದಲಾಗುವ ಪದನಾಮ, ವೇತನ ಶ್ರೇಣಿ |
|---|---|---|---|---|
| 1 | ಡಾ. ಬಿಂದು ಶಿವರಾಂ ಸಹಾಯಕ ದಂತ ಚಿಕಿತ್ಸಕರು, ಕಾ.ರಾ.ವಿ. ಆಸ್ಪತ್ರೆ, ಇಂದಿರಾನಗರ, ಬೆಂಗಳೂರು–560 038. ಬಿ.ಡಿ.ಎಸ್. ಎಂ.ಡಿ.ಎಸ್ ಓರಲ್ ಸರ್ಜರಿ,14050–25050–19–12–1971 | 29–09–1997 | 07–12–2007 ಹಿರಿಯ ದಂತ ಶಸ್ತ್ರ ಚಿಕಿತ್ಸಕರು,15200–25650 | 29–09–2010 ಮುಖ್ಯ ದಂತ ಶಸ್ತ್ರ ಚಿಕಿತ್ಸಕರು, 18150–26925 |
| 2 | ಡಾ. ಕಾಂತಿ ಜಿ. ಸಹಾಯಕ ದಂತ ಚಿಕಿತ್ಸಕರು, ಕಾ.ರಾ.ವಿ. ಆಸ್ಪತ್ರೆ, ಇಂದಿರಾನಗರ, ಬೆಂಗಳೂರು– 560 038. ಬಿ.ಡಿ.ಎಸ್. ಎಂ.ಡಿ.ಎಸ್. ಕನ್ಸರ್ವೇಟಿವ್ ಡೆಂಟಿಸ್ಟ್ರಿ ಮತ್ತು ಎಂಡೋಡಾಂಟಿಕ್ಸ್ 14050–25050–12–06–1972 | 27–09–1997 | 07–12–2007 ಹಿರಿಯ ದಂತ ಶಸ್ತ್ರ ಚಿಕಿತ್ಸಕರು 15200–25650 | 27–09–2010 ಮುಖ್ಯ ದಂತ ಶಸ್ತ್ರ ಚಿಕಿತ್ಸಕರು 18150–26925 |

ಈ ಪರಿಷ್ಕತ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಕಾಇ 328 Ser–2/2012, ದಿನಾಂಕ: 30–07–2012ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ, ಮತ್ತು ಅವರ ಹೆಸರಿನಲ್ಲಿ,

**ಗೋವಿಂದ ಸ್ವಾಮಿ**

ಪೀಠಾಧಿಕಾರಿ–5

ಕಾರ್ಮಿಕ ಇಲಾಖೆ (ಕಾ.ರಾ.ವಿ.ಯೋ (ವೈ) ಸೇವೆಗಳು)

**PR.2307**

## ಕಾರ್ಮಿಕ ಸಚಿವಾಲಯ

**ವಿಷಯ:** 1. ಡಾ:ಶಾಂತಾ ಯು. ಹಿರಿಯ ತಜ್ಞರು ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ** 1. ಎಡಿಜಿಪಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಂ–35/ಸಿ.ಆರ್.10/2011, ಹಾಸನ ದಿನಾಂಕ:18–06–2012.

2. ತನಿಖಾ ವರದಿಯ ಸಂಖ್ಯೆ:ಹಾಸನ ಲೋಕಾಯುಕ್ತ ಠಾಣಾ ಮೊ.ನಂ.10/2011 ಕಲಂ.7, 13 (1) (ಡಿ)ರೇ/ವಿ 13(2) ಆಫ್ ಪಿ.ಸಿ. ಆಕ್ಟ್–1988ರ ಪ್ರಕರಣದಲ್ಲಿ ಅಂತಿಮ ವರದಿ ದಿನಾಂಕ:02–02–2012.

3. ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ, ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:–**

ಡಾ:ಶಾಂತಾ ಯು. ಹಿರಿಯ ತಜ್ಞರು, ಇವರ ವಿರುದ್ಧ ಗುನ್ನೆ ಸಂಖ್ಯೆ.10/2011ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಹಾಸನ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ 2, 3) ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ:18–06–2012 (ಉಲ್ಲೇಖ–1) ರೊಡನೆ ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19 (1) (ಬಿ)ನೆಯ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಎಡಿಜಿಪಿ ಪೊಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ.ಲೋಕ್/ಐಎನ್‌ವಿ(ಜಿ)/ಎಂ–35/ಸಿಆರ್–10/2011 ಹಾಸನ ದಿನಾಂಕ:18–06–2012ರಲ್ಲಿ ಕಳುಹಿಸಿಕೊಟ್ಟ ಈ ದಾಖಲಾತಿಗಳನ್ನು ಪರಿಶೀಲಿಸಿದೆ.

(ಅ) ಶ್ರೀಮತಿ ಎಸ್.ಟಿ.ಸಾವಿತ್ರಮ್ಮ ಕೋಂ ನಾಗರಾಜು ಕೆ.ಜಿ. ನಾಗಸಮುದ್ರ ರಸ್ತೆ, ಚನ್ನರಾಯಪಟ್ಟಣ ಟೌನ್, ಹಾಸನ ಜಿಲ್ಲೆ ರವರ ಫಿರ್ಯಾದಿ ದಿನಾಂಕ:08–06–2011.

(ಆ) ಪ್ರಥಮ ವರ್ತಮಾನ ವರದಿ ಹಾಸನ ಲೋಕಾಯುಕ್ತ ಪೊಲೀಸ್ ಠಾಣೆ, ಪ್ರಕರಣ ಸಂಖ್ಯೆ. 10/2011, ದಿನಾಂಕ:08–06–2011.

(ಇ) ಪ್ರಾಯೋಗಿಕ ಪಂಚನಾಮೆ ದಿನಾಂಕ:08–06–2011.

(ಈ) ಟ್ರ್ಯಾಪ್ ಮಹಜರ್ ದಿನಾಂಕ:08–06–2011.

(ಉ) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ.RACE/CKM/LOK/17/11–12, ದಿನಾಂಕ:23–12–2011.

(ಊ) ಕೃತ್ಯ ನಡೆದ ಸ್ಥಳದ ನಕಾಶೆ.

(ಋ) ಸಾಕ್ಷಿಗಳ ಹೇಳಿಕೆಗಳು:–

1) ಶ್ರೀಮತಿ ಎಸ್.ಟಿ.ಸಾವಿತ್ರಮ್ಮ ಕೋಂ ನಾಗರಾಜ ಕೆ.ಜಿ. 35 ವರ್ಷ ನಾಗಸಮುದ್ರ ರಸ್ತೆ, ಚನ್ನರಾಯಪಟ್ಟಣ ಟೌನ್, ಹಾಸನ ಜಿಲ್ಲೆ.

2) ಶ್ರೀ ರವಿಶಂಕರ್ ಜಿ.ವಿ. ಬಿನ್ ಜಿ.ವೆಂಕಟೇಗೌಡ, 35 ವರ್ಷ, ದ್ವಿ.ದ.ಸ. ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾಸನ, ವಾಸ:ಗುಂಜಾವು ಗ್ರಾಮ, ಹೊಳೆ ನರಸೀಪುರ ತಾಲ್ಲೂಕು, ಮೊಬೈಲ್ ನಂ.9449428767.

3) ಶ್ರೀಮತಿ ಸುಮಾ ಡಿ.ಪಿ. ಕೋಂ ರವೀಂದ್ರ, 26 ವರ್ಷ ದ್ವಿ.ದ.ಸ. ಮಿಸಲೇನಿಯಸ್ ವಿಭಾಗ, ಜಿಲ್ಲಾಧಿಕಾರಿಗಳ ಕಛೇರಿ, ಹಾಸನ ವಾಸ ನಂ.182/2, ಆದಿಚುಂಚನಗಿರಿ ಕಲ್ಯಾಣ ಮಂಟಪ ಹಿಂಭಾಗ, ರವೀಂದ್ರ ನಗರ, ಹಾಸನ ಮೊಬೈಲ್ ನಂ.9482064906.

4) ಶ್ರೀ ಜಯರಾಮ ಬಿನ್ ಅನಂತ, 25 ವರ್ಷ ಕಾಮತ್ ಯಾತ್ರಿ ನಿವಾಸದಲ್ಲಿ ಅಡುಗೆ ಕೆಲಸ, ಗಾಂಧಿನಗರ, ಬೆಂಗಳೂರು. ಸ್ವಂತ ಊರು:ದೊಡ್ಡತರಹಳ್ಳಿ ಗ್ರಾಮ, ಕಿಕ್ಕೇರಿ ಹೋಬಳಿ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ.

5) ಶ್ರೀಮತಿ ಇಂದಿರಾ ಕೋಂ ಜಯರಾಮ 23 ವರ್ಷ, ದೊಡ್ಡತರಹಳ್ಳಿ ಗ್ರಾಮ, ಕಿಕ್ಕೇರಿ ಹೋಬಳಿ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ.

6) ಡಾ:ಧನಶೇಖರ್ 46 ವರ್ಷ ಆಡಳಿತ ವೈದ್ಯಾಧಿಕಾರಿ, ಸರ್ಕಾರಿ ಆಸ್ಪತ್ರೆ, ಚನ್ನರಾಯಪಟ್ಟಣ ಟೌನ್, ಹಾಸನ ಜಿಲ್ಲೆ. ವಾಸ ರವಿ ನಿಲಯ, ಬಾಗೂರು ರಸ್ತೆ, ಚನ್ನರಾಯಪಟ್ಟಣ, ಸ್ವಂತ ಊರು ಅಮೃತ್ತೂರು, ಕುಣಿಗಲ್ ತಾ: ತುಮಕೂರು ಜಿಲ್ಲೆ.

7) ಶ್ರೀಮತಿ ಮಮತ ಕೋಂ. ಕೆ.ಆರ್.ಬಸವರಾಜ್ 31 ವರ್ಷ ಸ್ಟಾಫ್ ನರ್ಸ್ ಸರ್ಕಾರಿ ಆಸ್ಪತ್ರೆ, ಚನ್ನರಾಯಪಟ್ಟಣ ಹಾಸನ ಜಿಲ್ಲೆ. ವಾಸ: ಡಿ.ಕಾಳೇನಹಳ್ಳಿ ಗ್ರಾಮ, ಚನ್ನರಾಯಪಟ್ಟಣ ತಾಲ್ಲೂಕು.

8) ಶ್ರೀಮತಿ ಪುಟ್ಟಮ್ಮ ಕೋಂ ಅನಂತ, ಊಪನಹಳ್ಳಿ ಗ್ರಾಮ ಯೂಲಿಯೂರು ಪೋಸ್ಟ್, ದಂಡಿಗನಹಳ್ಳಿ ಹೋಬಳಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ.

9) ಶ್ರೀ ರಂಗಯ್ಯ, ಡಿ.ಎಸ್. ಜೂನಿಯರ್ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ನಂ.2, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ–ವಿಭಾಗ, ಚನ್ನರಾಯಪಟ್ಟಣ.

10) ಶ್ರೀ ನಿತ್ಯಾನಂದ ಕುಮಾರ್ ಬಿನ್ ಕೃಷ್ಣೇಗೌಡ, 51 ವರ್ಷ ಮುಖ್ಯ ಆರಕ್ಷಕರು, ಲೋಕಾಯುಕ್ತ ಪೊಲೀಸ್ ಠಾಣೆ, ಹಾಸನ.

11) ಶ್ರೀ ಚಲುವೇಗೌಡ ಬಿನ್ ಲೇಟ್ ವೈರ್‌ಮುಡಿಗೌಡ, 56 ವರ್ಷ, ಮುಖ್ಯ ಆರಕ್ಷಕರು, ಲೋಕಾಯುಕ್ತ ಪೊಲೀಸ್ ಠಾಣೆ, ಹಾಸನ.

12) ಶ್ರೀ ಮಂಜಪ್ಪ ಬಿನ್ ಲೇಟ್ ಗುಂಡಶೆಟ್ಟಿ, 51 ವರ್ಷ, ಮುಖ್ಯ ಆರಕ್ಷಕರು, ಲೋಕಯುಕ್ತ ಪೊಲೀಸ್ ಠಾಣೆ, ಹಾಸನ.

13) ಶ್ರೀ ಹೆಚ್.ಎಸ್.ಗಿರೀಶ್ ಬಿನ್ ಸುಬ್ಬೇಗೌಡ, 37 ವರ್ಷ, ಸಿ.ಪಿ.ಸಿ. ಲೋಕಾಯುಕ್ತ ಪೊಲೀಸ್ ಠಾಣೆ.

14) ಶ್ರೀ ಮರಿಗೌಡ ಬಿನ್ ಲೇಟ್ ರೇವಣ್ಣ, 35 ವರ್ಷ, ಸಿ.ಪಿ.ಸಿ. ಕಲೋ ಠಾಣೆ, ಹಾಸನ.

15) ಶ್ರೀ ವಿ.ಆರ್.ರಾಮಕೃಷ್ಣ ಬಿನ್ ರಾಮಾಭೋವಿ 34 ವರ್ಷ ಸಿ.ಪಿ.ಸಿ. ಕಲೋ ಠಾಣೆ, ಹಾಸನ.

16) ಶ್ರೀ ಕೆ.ಶಿವಸ್ವಾಮಿ ಬಿನ್ ಕೃಷ್ಣಪ್ಪ, 41 ವರ್ಷ, ಸಿ.ಪಿ.ಸಿ.ಲೋಕಾಯುಕ್ತ ಪೊಲೀಸ್ ಠಾಣೆ, ಹಾಸನ.

17) ಶ್ರೀ ಎಂ.ಆರ್.ಸೋಮಶೇಖರ್ ಬಿನ್ ಲೇಟ್ ವೆಂಕಟಾಚಾರಿ, 40 ವರ್ಷ ಎ.ಪಿ.ಸಿ. ಜೀಪ್ ಚಾಲಕರು, ಲೋಕಾಯುಕ್ತ ಪೊಲೀಸ್ ಠಾಣೆ, ಹಾಸನ.

18) ಶ್ರೀಮತಿ ಲಕ್ಷ್ಮಿ ಕೋಂ ಪಿ. ಮೋಹನದಾಸ್ 52 ವರ್ಷ ಸ್ಟಾಫ್ ನರ್ಸ್, ಸರ್ಕಾರಿ ಆಸ್ಪತ್ರೆ, ಚನ್ನರಾಯಪಟ್ಟಣ ಹಾಸನ ಜಿಲ್ಲೆ.

19) ಶ್ರೀಮತಿ ಪ್ರತಿಭಾ ಕೋಂ ಕಾರ್ತಿಕ್ 27 ವರ್ಷ, ಎರಡನೇ ದರ್ಜೆ ಸಹಾಯಕಿ, ಸಾರ್ವಜನಿಕ ಸರ್ಕಾರಿ ಆಸ್ಪತ್ರೆ, ಚನ್ನರಾಯಪಟ್ಟಣ.

20) ಶ್ರೀ ಎಸ್.ಮಂಜುನಾಥ, ಸಹಾಯಕ ರಸಾಯನಿಕ ಪರೀಕ್ಷಕರು, ಪ್ರಾದೇಶಿಕ ಪ್ರಯೋಗ ಶಾಲೆ, ಚಿಕ್ಕಮಗಳೂರು.

21) ಶ್ರೀ ಪಿ.ಎಲ್.ರುದ್ರಮುನಿ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ ಠಾಣೆ, ಹಾಸನ.

(ಎ) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳು ಹಾಸನ ಲೋಕಾಯುಕ್ತ ಠಾಣೆ ಮೊ.ನಂ.10/2011 ಕಲಂ.7, 13(1)(ಡಿ)ರ:ವಿ13(2)ಆಫ್ ಪಿ.ಸಿ.ಆಕ್ಟ್–198೮ ಪ್ರಕರಣದ ಅಂತಿಮ ವರದಿ.

ವಿಷಯ:– ಹೆರಿಗೆ ಸಂಬಂಧ ದಾಖಲಾತಿ.

**(ಏ) ಆಪಾದಿತರ ಸಮಜಾಯಿಷಿ ಹೇಳಿಕೆಗಳು.**

ದಿನಾಂಕ:08–06–2011ರಂದು ಹಾಸನ ಲೋಕಾಯುಕ್ತ ಪೊಲೀಸರು ನನ್ನನ್ನು ಟ್ರ್ಯಾಪ್ ಮಾಡಿದ ಬಗ್ಗೆ ನಾನು ಈಗ ಏನನ್ನು ಹೇಳಬಯಸುವುದಿಲ್ಲ ಮತ್ತು ನಾನು ಸೂಕ್ತ ವೇಳೆಯಲ್ಲಿ ನನ್ನ ಸಮಜಾಯಿಷಿಯನ್ನು ತಿಳಿಸುತ್ತೇನೆ.

ತನಿಖಾಧಿಕಾರಿಗಳಾದ ಶ್ರೀ ಪಿ.ಎಲ್.ರುದ್ರಮುನಿ ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಭಾಗ, ಕರ್ನಾಟಕ ಲೊಕಾಯುಕ್ತ ಪೊಲೀಸ್ ಠಾಣೆ ಹಾಸನ ಇವರು ಡಾ:ಶಾಂತಾ ಯು. ಹಿರಿಯ ತಜ್ಞರು ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಪೊಲೀಸ್ ವಿಭಾಗ ಕರ್ನಾಟಕ ಲೋಕಾಯುಕ್ತ ಹಾಸನ ಆರಕ್ಷಕ ಠಾಣೆಯಲ್ಲಿ ಗುನ್ನೆ ಸಂಖ್ಯೆ.10/2011ರಲ್ಲಿ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1) (d) (ಡಿ) (ಡಿ) ಜೊತೆಯಲ್ಲಿ ಓದಲಾದ 13 (2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರು ಡಾ:ಶಾಂತಾ ಯು. ಹಿರಿಯ ತಜ್ಞರು ಫಿರ್ಯಾದಿಯಾದ ಶ್ರೀಮತಿ ಎಸ್.ಸಾವಿತ್ರಮ್ಮ ಕೋಂ ನಾಗರಾಜ ಕೆ.ಜಿ. ನಾಗಸಮುದ್ರ ರಸ್ತೆ, ಚನ್ನರಾಯಪಟ್ಟಣ ಟೌನ್ ಹಾಸನ ಜಿಲ್ಲೆ ಇವರ ಅಕ್ಕನ ಸೊಸೆಯಾದ ಶ್ರೀಮತಿ ಇಂದಿರಾರವರು ಹೆರಿಗೆಗಾಗಿ ಆಸ್ಪತ್ರೆಗೆ ದಾಖಲಾದಾಗ ವೈದ್ಯಕೀಯ ಸೇವೆಯನ್ನು ಮಾಡಲು ₹1,000–00 (ಒಂದು ಸಾವಿರ ರೂಪಾಯಿಗಳು ಮಾತ್ರ)ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ:08–06–2011ರಂದು ಚನ್ನರಾಯಪಟ್ಟಣ ಸರ್ಕಾರಿ ಆಸ್ಪತ್ರೆಯಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಡಾ:ಶಾಂತಾ ಯು. ಹಿರಿಯ ತಜ್ಞರು ಅಕ್ರಮ ಸಂಭಾವನೆಯಾದ ₹1,000–00ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು, ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸರ್ಕಾರಿ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಹಾಗೂ ₹500–00ಗಳ ಎರಡು ನೋಟುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಫ್ತಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ₹1000–00ಗಳನ್ನು ಡಾ:ಶಾಂತಾ ಯು. ರವರಿಂದ ಚನ್ನರಾಯಪಟ್ಟಣ ಸರ್ಕಾರಿ ಆಸ್ಪತ್ರೆಯ ವೈದ್ಯರ ಕೊಠಡಿಯಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಡಾ:ಶಾಂತಾ ಯು. ಹಿರಿಯ ತಜ್ಞರು, ಇವರು ಮೂಲತ: ಕಾರ್ಮಿಕ ರಾಜ್ಯ ವಿಮಾ ಯೋಜನೆ ವೈದ್ಯಕೀಯ ಸೇವೆಗಳು ಇಲಾಖೆಯವರಾಗಿದ್ದು ಆ.ಕು.ಕ. ಇಲಾಖೆಯ ಸರ್ಕಾರಿ ಆಸ್ಪತ್ರೆ, ಚನ್ನರಾಯಪಟ್ಟಣ ಹಾಸನ ಜಿಲ್ಲೆ ಇಲ್ಲಿ ನಿಯೋಜನೆ ಮೇಲೆ ಕರ್ತವ್ಯ ನಿರತರಾಗಿದ್ದಾಗ ದಿನಾಂಕ:08–06–2011ರಂದು ಅಕ್ರಮ ಸಂಭಾವನೆ ಪಡೆದಿರುವುದು ಕರ್ನಾಟಕ ಲೋಕಾಯುಕ್ತ ಇವರ ಪೊಲೀಸ್ ತನಿಖೆಯಿಂದ ಮೇಲ್ನೋಟಕ್ಕೆ ಸಾಬೀತಾಗಿದೆ.

ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13 (1) (ಡಿ) ಜತೆಯಲ್ಲಿ ಓದಲಾದ 13 (2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7, 13 (1) (ಡಿ) ಮತ್ತು ಜೊತೆಗೆ 13 (2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತಳನ್ನು ಕೆಲಸದಿಂದ ತೆಗೆದುಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯದೆ 1988ರ ಕಲಂ 19 (1) (ಬಿ) ರ ಅಡಿ ಆಪಾದಿತ ಅಧಿಕಾರಿಯಾದ ಡಾ:ಶಾಂತಾ ಯು. ಹಿರಿಯ ತಜ್ಞರು ಇವರನ್ನು ಕಲಂ7, ಮತ್ತು 13 (1) (ಡಿ) ಜೊತೆಗೆ 13 (2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ.ಕಾಇ 335 ಎಲ್‌ಎಸ್‌ಐ 2011, ಬೆಂಗಳೂರು, ದಿನಾಂಕ:22–11–2012.**

ಡಾ:ಶಾಂತಾ ಯು. ಹಿರಿಯ ತಜ್ಞರು, ಇವರ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಅಭಿಯೋಜನೆಗೆ ಒಳಪಡಿಸಲು ಇವರನ್ನು ಹುದ್ದೆಯಿಂದ ತೆಗೆದುಹಾಕುವ (ವಜಾ ಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಡಾ:ಶಾಂತಾ ಯು. ಹಿರಿಯ ತಜ್ಞರು ಇವರನ್ನು ಲಂಚ ನಿರೋಧಕ ಕಾಯ್ದೆ ಕಲಂ7, 13 (1) (ಡಿ) ಜೊತೆಯಲ್ಲಿ ಓದಲಾದ ಕಲಂ13 (2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗೋವಿಂದಸ್ವಾಮಿ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ. (ಕಾರಾವಿ ಯೋ (ವೈ) ಸೇವೆಗಳು)

PR.2208

## REVENUE SECRETARIAT

**SUBJECT:** Shifting of Bagdad Asmara Field Firing Range, Belgaum, reg.

**READ**: 1) Government order No.RD 01 TRT 1970 dated:01.11.1970

2) Government order No.RD 05 TRT 1970 dated:08.01.1981

3) Government order No.RD 41 LGL 1998 dated:04.05.2000

4) Letter No.RCB: LND:CR:24:2012-13 dt.19-07-2012 from the Regional Commissioner, Belgaum .

**PREAMBLE:**

The Revenue Department vide Notification No. RD 01 TRT 1970, dated: 01.11.1970 defined certain areas for the Army to periodically carry out field firing and artillery practice for a period of 10 years to an extent of 10639-36 acres. Subsequently vide Notification No. RD 5 TRT 1970, dated 08.01.1981 the same area was continued for a further period of 20 years. These two notifications were issued in exercise of powers conferred under section 9 of the Manoeuvres, Field Firing and Artillery Practice Act – 1938 (Act No. 5 of 1938).

2. Subsequently, another G.O RD 41 LGL 1998, dated 24.5.2000 was issued extending the period for utilization of Artillery and Field Firing for a further period of 20 years. In this order the extent of land provided was reduced from 10,639.36 acres to 7,469.11 acres

3. These lands are situated within one kilometer distance from the Belgaum City Corporation limits. Over the years, there have been several requests, both from the elected representatives as well as the public, that since these lands were permitted to be utilized as a Field Firing range it has caused hardship to the local public preventing them from proper access to their homes, agricultural lands and also preventing any constructions to be taken up in these lands.

4. In order to resolve the matters, a Committee consisting of Principal Secretary, Revenue Department, Principal Secretary, Law Justice & Human Rights Department & Deputy Commissioner, Belgaum was constituted. The Committee visited Belgaum on 14.9.2012 and held discussions with all the concerned. The Committee submitted a report. As per the report of the Committee, an area of 722 acres 32 guntas 13 annas of various survey numbers of Belgaum Village (Turkamatti) stands in the name of State Government as Sarkari Kuran since 1873 till date. The Defence Officers have not produced any documentary evidence to show that these are the defence lands. The Committee has recommended that as per the land revenue records these lands are sarkar kuran lands belong to the State Government. The defence has no rights over these lands as per the RTC's. Hence the State Government may authorize the Deputy Commissioner to initiate action under section 94 of the Karnataka Land Revenue Act for eviction of the unauthorized occupants.

5. Apart from the 7301.06 acres which the Army is utilizing for Bagdad Asmara Field Firing Range the Army is also utilizing two other forest lands Marihal and Ramadurga in Belgaum District itself as Field Firing Ranges. The Department of Forests, Ecology and Environment vide their order dated 28.6.2012 and 03.10.2012 has agreed for the release of only actual impact zone to be utilised as a firing range.

6. Under the Manoeuvres, Field Firing and Artillery Practice Act, 1938 (Act No.5 of 1938) Section 2(1) the State Government may, by a notification in the local Gazette authorize the execution of military manoeuvres over any area specified in the notification during a specified period not exceeding three months: Provided that the same area or any part thereof shall not ordinarily be so specified more than once in any period of three years. Section 3(2) of the above Act states that "they shall not authorize entry of or interference with any place of worship,or any dwelling house or premises attached thereto or any educational institution, factory, workshop or store or any premises used for the carrying on of any trade, business or manufacture or any garden or pleasure ground .

7. Since the land has been permitted to be utilized for Field Firing Range no other construction activity is permitted in these areas and the Belgaum Urban Development Authority also has not provided for any specific activity in their master plan for this area.

8. After examining the matter in terms of the provisions of Manoeuvres Field Firing and Artilleru Practive Act, 5 of 1938 and Karnataka Land Grants Rules 1969 the following orders are issued.

**GOVERNMET ORDER NO:RD:54:LGL:2011, BANGALORE, DATED:23.11.2012**

Government of Karnataka are pleased to accord approval for the following:-

(i) to withdraw the Government order No.RD 41 LGL 98, dated 24.05.2000, which was issued without following the mandatory provision of law.

(ii) taking over of 722 acres 32 guntas 13 annas of Turkamatti land. Due process as prescribed under sec 39 and 94 of the Karnataka Land Revenue Act is to be followed by the Deputy Commissioner, Belgaum.

(iii) Deputy Commissioner, Belgaum to issue a letter to the Defence not to take up any construction works in 7301.06 acres of private lands belonging to the farmers.

(iv) Constitution of a Land Audit Committee to ascertain the exact requirement of land which would be required for the Field Firing Range;

(v) to request the Ministry of Defence to proceed with the payment of compensation to the farmers for having utilized private land over the years for a Firing Range. [The matter of compensation to be decided by the Committee chaired by the Deputy Commissioner;]

(vi) to proceed with the acquisition of land under the Land Acquisition Act, once the extent of land required is ascertained by the Ministry of Defence and the Land Audit Committee recommends the required extent of land.

By order and in the name of the Governor of Karnataka,

**H.J.Lakshminarayana**

Under Secretary to Government,

Revenue Department.(Land Grants-3)

**PR.2260**